# ಜೀವನ ಮಾಧುರ್ಯ

ಲೇಖಕರು :

ಡಾ॥ ಮುಹಮ್ಮದ್ ಅರೀಫಿ

ಅನುವಾದ :

ಅಬ್ದುಸ್ಸಲಾಮ್ ಕಾಟಿಪಳ್ಳ

(ಸಂಪಾದಕರು 'ಸಿರಾತೇ ಮುಸ್ತಖೀಮ್' ಕನ್ನಡ ಮಾಸಿಕ)

ದಾವಾ ಪಬ್ಲಿಕೇಶನ್ಸ್

ಕಾಟಿಪಳ್ಳ

# ಜೀವನ ಮಾಧುರ್ಯ

ಲೇಖಕರು :

**ಡಾ. ಮುಹಮ್ಮದ್ ಅರೀಫಿ**

ಅನುವಾದ :

**ಅಬ್ದುಸ್ಸಲಾಮ್ ಕಾಟಿಪಳ್ಳ**

(ಸಂಪಾದಕರು : ಸಿರಾತೇ ಮುಸ್ತಖೀಮ್ ಕನ್ನಡ ಮಾಸಿಕ)

ಪ್ರಕಟನೆ :

**ದಾವಾ ಪಬ್ಲಿಕೇಶನ್ಸ್**

(ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮಾನ್ಯತೆ ಪಡೆದಿದೆ)

ಹಿರಾ ಕಾಂಪ್ಲೆಕ್ಸ್, 2ನೇ ಬ್ಲಾಕ್, ಕಾಟಿಪಳ್ಳ, ಮಂಗಳೂರು- 575 030

Mob : 9986282449

E-mail : asshahadat@yahoo.co.in

الحمد لله رب العالمين،
الصلاة والسلام على أشرف الأنبياء والمرسلين،
وعلى آله وصحبه ومن اتبعه بإحسان إلى يوم الدين،
أما بعد

# ಅನುವಾದಕರ ಮಾತು

'ಝಿಂದಗೀಸೆ ಲುತ್ಫ್ ಉಠಾಯಿಯೆ" ಎಂಬ ಶೀರ್ಷಿಕೆಯಲ್ಲಿ ಪ್ರಸಿದ್ಧವಾದ ಶೇಖ್ ಮುಹಮ್ಮದ್ ಅರೀಫಿಯವರ ಗ್ರಂಥದಿಂದ ಆಯ್ದ ಕೆಲವು ಲೇಖನಗಳ ಸಂಗ್ರಹವೇ ಜೀವನ ಮಾಧುರ್ಯ ಎಂಬ ಈ ಪುಸ್ತಕವಾಗಿದೆ.

ಬಳ್ಳಾರಿಯ ಸಂಡೂರಿನಲ್ಲಿ ನಡೆದ ಒಂದು ಧಾರ್ಮಿಕ ಕಾರ್ಯಕ್ರಮದಲ್ಲಿ ಉಪನ್ಯಾಸಕರಾಗಿ, ಅತಿಥಿಗಳಾಗಿ ಬಂದವರಿಗೆ "ಝಿಂದಗೀಸೆ ಲುತ್ಫ್ ಉಠಾಯಿಯೆ" ಎಂಬ ಈ ಪುಸ್ತಕವನ್ನು ಸ್ಮರಣಿಕೆಯಾಗಿ ನೀಡಲಾಗಿತ್ತು. ಕಾರ್ಯಕ್ರಮದ ಸಂಘಟಕರಲ್ಲಿ ಓರ್ವರಾಗಿದ್ದ ಮೌಲ್ವಿ ಇಬ್ರಾಹೀಮ್‌ರವರು ಈ ಗ್ರಂಥದ ಕುರಿತು ಆಡಿದ ಪ್ರಶಂಸೆಯ ಮಾತುಗಳು ಈ ಗ್ರಂಥವನ್ನು ಕನ್ನಡೀಕರಿಸಬೇಕೆಂಬ ಇರಾದೆಯನ್ನು ನನ್ನ ಮನದಲ್ಲಿ ಸೃಷ್ಟಿಸಿತು.

ವಾಸ್ತವದಲ್ಲಿ ಮೂಲಗ್ರಂಥವು ಸುಮಾರು 400 ಪುಟಗಳಷ್ಟು ವಿಶಾಲವಾಗಿದೆ. ನಾವೀಗ ಅದರಿಂದ ಒಂದು ಭಾಗವನ್ನಷ್ಟೇ ಭಾಷಾಂತರಿಸಿ "ಜೀವನ ಮಾಧುರ್ಯ" ಎಂಬ ಶೀರ್ಷಿಕೆಯಿಂದ ಓದುಗರ ಕೈಗಿಡುತ್ತಿದ್ದೇವೆ.

ಕಣ್ಣುರೆಪ್ಪೆ ಹೊಡೆಯುವುದರೊಳಗೆ ದಿನಗಳು, ವರ್ಷಗಳು ಉರುಳುತ್ತಿದೆ. ನಿನ್ನೆ ಕಣ್ಣಿಗೆ-ಮನಸ್ಸಿಗೆ ಮುದ ನೀಡುತ್ತಿದ್ದ ಸಹವಾಸಿಗಳು ಇಂದು ನೆನಪಿನ ಹಾಳೆಗಳೊಂದಿಗೆ ಸೇರಿಕೊಳ್ಳುತ್ತಿದ್ದಾರೆ. ವರ್ಷಗಳು ದಿನಗಳಂತೆ ದಿನಗಳು ಕ್ಷಣಗಳಂತೆ ಸರಿದು ಹೋಗುತ್ತಿದೆ. ಅಲ್ಲಾಹನು ನಿಶ್ಚಯಿಸಿದ ಕ್ಷಣದಲ್ಲಿ ಎಲ್ಲರೂ ಮೃತ್ಯುವಿನ ಕರೆಗೆ ಓಗೊಡಲೇಬೇಕು. ಅವನು ನೀಡುವ ಅವಧಿಯನ್ನು ಅವನ ಧರ್ಮದ ಹಾದಿಯಲ್ಲಿ ಸವೆದು ಅವನ ಸಂಪ್ರೀತಿಗಳಿಸಿ ಧನ್ಯರಾಗುವ ಮನಸ್ಸು, ಬುದ್ಧಿ ಮತ್ತು ಅವಕಾಶ ನೀಡೆಂದು ಅವನಲ್ಲಿ ಬೇಡೋಣ... ಐಹಿಕ ಜೀವನವನ್ನೂ ಪಾರತ್ರಿಕ ಜೀವನವನ್ನೂ ಮಾಧುರ್ಯಗೊಳಿಸೋಣ. ಅಲ್ಲಾಹು ಅನುಗ್ರಹಿಸಲಿ...

ಖೈರುಕುಮ್ ಮನ್ ತಅಲ್ಲಮಲ್ ಕುರ್‌ಆನ ವ ಅಲ್ಲಮಹು

**ದಾವಾ ಪಬ್ಲಿಕೇಶನ್ಸ್**

(ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮಾನ್ಯತೆ ಪಡೆದಿದೆ)
ಹಿರಾ ಕಾಂಪ್ಲೆಕ್ಸ್, 2ನೇ ಬ್ಲಾಕ್, ಕಾಟಿಪಳ್ಳ, ಮಂಗಳೂರು- 575 030
Ph. : 0824-3256204, Mob : 9986282449 E-mail : asshahadat@yahoo.co.in

Title : JEEVANAA MADHURYA

Author : DR. MOHAMMAD ARIFI

Translator : ABDUSSALAM KATIPALLA
(Editor, Sirathe Musthaqeem Monthly)

Publisher : DAWA PUBLICATIONS
Affiliated to Jamiate Ahle Hadees Karnataka Goa
Hira Complex, 2nd Block,
Katipalla, Mangalore - 575 030.
Mob : 9986282449
E-mail : asshahadat@yahoo.co.in

Printers : Pixel
Mangalore

Copies : 1000
January 2012 - 1000 Copy

Price : **Rs. 60**

بِسْمِ اللَّهِ الرَّحْمَٰنِ الرَّحِيمِ

# ಅವಕಾಶ ಪಡೆದು ಗುರಿ ತಲುಪಲಾರದ ದುರ್ದೇವಿಗಳು

ನನಗೆ ಚೆನ್ನಾಗಿ ನೆನಪಿರುವ ಒಂದು ಸಂಗತಿ. ಅಂದು ನನ್ನ ಮೊಬೈಲ್ ಪೋನ್‌ನಲ್ಲಿ ಒಂದು ಸಂದೇಶ ಬಂತು. ಅದು ಸಂಕ್ಷಿಪ್ತ ರೂಪದ ಪ್ರಶ್ನೆಯ ರೂಪದಲ್ಲಿತ್ತು.

ಯಾ ಶೈಖ್! ಆತ್ಮಹತ್ಯೆಯ ಬಗ್ಗೆ ಶರೀಅತ್‌ನ ದೃಷ್ಟಿಕೋನವೇನು?

ನಾನು ತಕ್ಷಣ ಫೋನ್ ತೆಗೆದು ಸಂದೇಶ ನೀಡಿದ ಸಂಖ್ಯೆಯನ್ನು ಸಂಪರ್ಕಿಸಿದೆ. ಮತ್ತೊಂದು ಕಡೆಯಿಂದ ಓರ್ವ ಯುವಕನ ಧ್ವಣಿ ಕೇಳಿ ಬಂತು. ಅವನು ಯವ್ವನದ ಮೆಟ್ಟಿಲಿನಲ್ಲಿ ಈಗಷ್ಟೇ ಪಾದಾರ್ಪಣೆ ಮಾಡಿದ್ದ.

ನಾನು ಹೇಳಿದೆ, ಕ್ಷಮಿಸಿ, ನಿಮ್ಮ ಪ್ರಶ್ನೆ ನನಗೆ ಅರ್ಥವಾಗಲಿಲ್ಲ. ಸ್ವಲ್ಪ ಪುನರಾವರ್ತಿಸುತ್ತೀರಾ?

ಅವನು ಜೀವನದಲ್ಲಿ ಜಿಗುಪ್ಸೆ ಹುಟ್ಟಿದವನಂತೆ ಉತ್ತರಿಸಿದ `ಶೈಖ್! ಪ್ರಶ್ನೆ ಅತ್ಯಂತ ಸ್ಪಷ್ಟವಿದೆ. ಆತ್ಮಹತ್ಯೆಯ ಕುರಿತು ಶರೀಅತಿನ ದೃಷ್ಟಿಕೋನವೇನು? ಅವನು ನಿರೀಕ್ಷಿಸಿರಲಾರದಂತಹಾ ಉತ್ತರ ಕೊಡಬೇಕೆಂದು ನಿರ್ದರಿಸಿಕೊಂಡು ನಾನು ನಗುತ್ತಾ “ಮೆಚ್ಚಲ್ಪಟ್ಟ ಕಾರ್ಯವಾಗಿದೆ” ಎಂದು ಹೇಳಿದೆ.

‘ಏನು’ ಅವರು ಚೀರಿದ.

ನಾನು ಕೇಳಿದೆ, ಆತ್ಮಹತ್ಯೆ ಮಾಡಲು ಯಾವ ರೀತಿಯನ್ನು ಸ್ವೀಕರಿಸಿಕೊಳ್ಳಬೇಕೆಂದು ನಿರ್ಧರಿಸಲು ನನ್ನಿಂದೇನಾದರೂ ಸಲಹೆ ಬೇಕಾಗಿತ್ತೇ?

ಯುವಕ ಉತ್ತರಿಸಲಿಲ್ಲ.

ಬಳಿಕ ನಾನು ಹೇಳಿದೆ, “ಸರಿ! ನೀವೇಕೆ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಬಯಸುತ್ತಿದ್ದೀರೆಂದಾದರೂ ಹೇಳಬಹುದೇ?”

ಅವನು ಹೇಳಿದ ‘ನನಗೆ ಯಾವುದೇ ನೌಕರಿ ಲಭಿಸುವುದಿಲ್ಲ. ಜನರು ನನ್ನನ್ನು ಇಷ್ಟಪಡುವುದೂ ಇಲ್ಲ. ವಾಸ್ತವದಲ್ಲಿ ನಾನೊಬ್ಬ ನಿರುಪಯುಕ್ತ ವ್ಯಕ್ತಿಯಾಗಿದ್ದೇನೆ” ಬಳಿಕ ಅವನು ನನಗೆ ವಿವರವಾಗಿ ಅವನ ಸ್ಥಿತಿ-ಗತಿಯನ್ನು ವಿವರಿಸಿ ಹೇಳಿದ. ಅವನು ಸ್ವಯಂ ಪರಿವರ್ತಿತನಾಗಲು ಮತ್ತು ತನ್ನ ಪ್ರತಿಭೆ ಮತ್ತು ಸಾಮರ್ಥ್ಯದಿಂದ ಲಾಭ ಪಡೆಯಲು ವಿಫಲನಾಗಿದ್ದ. ವಾಸ್ತವವೇನೆಂದರೆ, ನಮ್ಮಲ್ಲಿ ಹೆಚ್ಚಿನವರಿಗೆ ಈ ಸಮಸ್ಯೆಯು ಇದ್ದೇ ಇರುತ್ತದೆ.

ಇಲ್ಲಿ ಉದ್ಭವಿಸುವ ಪ್ರಶ್ನೆಯೇನೆಂದರೆ ಮನುಷ್ಯನು ತನ್ನನ್ನು ಇಷ್ಟೊಂದು ಕೀಳಾಗಿ ಏಕೆ

ಪರಿಗಣಿಸುತ್ತಾನೆ? ಎನ್ನುವುದಾಗಿದೆ. ಅವರೇಕೆ ಪರ್ವತದ ಶಿಖರದಲ್ಲಿ ನಿಂತ ಜನರಲ್ಲೇ ದೃಷ್ಟಿಯನ್ನು ಕೇಂದ್ರೀಕರಿಸಬೇಕು ಅವರಂತೆ ಇವರೂ ಶಿಖರದ ತುತ್ತುತುದಿಗೆ ತಲಪಲು ಪ್ರಯತ್ನಿಸಬಾರದೇಕೆ?

ಕನಿಷ್ಠ ಜನರು ನೋಡುತ್ತಿದ್ದಂತೆಯೇ ಪರ್ವತವೇರಲು ಪ್ರಾರಂಭಿಸಬಹುದಲ್ಲವೇ?
ಕವಿಯೋರ್ವರ ಕಾವ್ಯ ಎಷ್ಟೊಂದು ಸುಂದರವಾಗಿದೆ ನೋಡಿ.
**"ಪರ್ವತದ ಎತ್ತರವನ್ನು ಕಂಡು ಹೆದರುವವರು ಪ್ರಪಾತದಲ್ಲೇ ಜೀವಿಸಬೇಕಾಗುತ್ತದೆ"**

ಯಾರು ಇಂತಹಾ ಲೇಖನ ಅಥವಾ ಗ್ರಂಥಗಳನ್ನು ಅಥವಾ ಇದರಲ್ಲಿ ಅಂತರ್ಗತ ವಿಷಯ ವಸ್ತುವನ್ನು ಗ್ರಹಿಸಿಕೊಳ್ಳುವುದಿಲ್ಲವೆನ್ನುವುದನ್ನು ನೀವು ತಿಳಿದಿಲ್ಲವೇ? ಹತಾಶನಾದ ಮನುಷ್ಯನು ತನ್ನ ಕೆಟ್ಟ ಚಾಳಿಯ ಹಿಂದೆ ಬಿದ್ದು ತನ್ನನ್ನು ತಾನೇ ಕೀಳಾಗಿ ಕಾಣುತ್ತಾನೆ. ಅವನು ಸ್ವಯಂ ತನ್ನಲ್ಲಿರುವ ಪ್ರತಿಭೆಗಳನ್ನು ಗುರುತಿಸಿಕೊಳ್ಳಲಾರದೆ ಮೂಲೆ ಸೇರಿ ಮುದುಡಿ ಕುಳಿತುಕೊಂಡು ಕೇಳುತ್ತಾನೆ 'ನಾನೇನು ಮಾಡಲಿ?' ಇದು ನನ್ನ ದುರಾದೃಷ್ಟವಾಗಿದೆ. ಅಲ್ಲಾಹು ನನಗೆ ಬರೆದಿದ್ದೇ ಇಷ್ಟು. ನಾನು ಇದರಿಂದ ಹತಾಶನಾಗಿ ಬಿಟ್ಟಿದ್ದೇನೆ. ನಾನು ನನ್ನ ಹಣೆಬರಹವನ್ನು ಬದಲಿಸಲಾರೆ. ಜನರೂ ನನ್ನಿಂದ ಹತಾಶರಾಗಿದ್ದಾರ. ನೀವು ನನ್ನನ್ನು ಖಾಲಿದ್‌ನಂತೆ ಭಾಷಣಕರ್ತನಾಗು ಅಥವಾ ಅಹ್ಮದ್‌ನಂತೆ ಪ್ರಸನ್ನವದನನಾಗಿರು ಅಥವಾ ಜವಾದ್‌ನಂತೆ ಜನಾನುರಾಗಿಯಾಗು ಎಂದರೆ ಹೇಗೆ ತಾನೇ ಸಾಧ್ಯ? ಇತ್ಯಾದಿ. ಇತ್ಯಾದಿ.

ಒಂದು ದಿನ ನಾನೊಂದು ಸಭೆಯಲ್ಲಿದ್ದೆ. ನನ್ನೊಂದಿಗೆ ಓರ್ವ ಹಿರಿಯ ವ್ಯಕ್ತಿಯೊಬ್ಬರೂ ಇದ್ದರು. ಸಭೆಯಲ್ಲಿ ಕುಳಿತು ಅಲ್ಲಿರುವ ಎಲ್ಲಾ ವಿಧದ, ವರ್ಗದ ಜನರ ಸಂಪರ್ಕ ಸಾಧಿಸುತ್ತಿದ್ದರು. ಸಾಮಾನ್ಯ ಅನುಭವ ಹೊಂದಿದ್ದು ಅವರು ತನ್ನ ಅಕ್ಕಪಕ್ಕದಲ್ಲಿ ಕುಳಿತಿದ್ದ ಜನರೊಂದಿಗೆ ಕುಶಲ ಸಂಭಾಷಣೆಯಲ್ಲಿ ಮಗ್ನರಾಗಿದ್ದರು. ಅವರು ಸಭೆಯಲ್ಲಿದ್ದವರ ಪೈಕಿ ವಯಸ್ಸಿನಲ್ಲಿ ಹಿರಿಯರೆಂಬ ನೆಲೆಯಲ್ಲಷ್ಟೇ ಗುರುತಿಸಲ್ಪಡುತ್ತಿದ್ದರು. ಅದಕ್ಕಿಂತ ಹೆಚ್ಚಿನ ವೈಶಿಷ್ಟ್ಯತೆಗಳು ಅಥವಾ ಅನುಭವಗಳೇನೂ ಅವರಿಗಿರಲಿಲ್ಲ.

ನಾನು ಅಲ್ಲಿ ಸಂಕ್ಷಿಪ್ತವಾದ ಒಂದು ಭಾಷಣ ನೀಡಿದೆ. ಅದರಲ್ಲಿ ಶೈಖ್ ಅಬ್ದುಲ್ ಅಝೀಝ್ ಬಿನ್ ಬಾಝ್‌ರವರ ಒಂದು ಪತ್ವಾದ ಕುರಿತು ಚರ್ಚಿಸಿದೆ. ನಾನು ನನ್ನ ಭಾಷಣ ಮುಗಿಸುವಷ್ಟರಲ್ಲಿ ಆ ಹಿರಿಯ ವ್ಯಕ್ತಿ ಬಂದು ನನ್ನನ್ನು ಆಲಂಗಿಸಿಕೊಂಡು "ನಾನು ಮತ್ತು ಬಿನ್ ಬಾಝ್ ಸಹಪಾಠಿಗಳಾಗಿದ್ದೆವು. ಇಂದಿಗೆ ನಲ್ವತ್ತು ವರ್ಷ ಮೊದಲು ನಾವು ಮಸೀದಿಯಲ್ಲಿ ಶೈಖ್ ಮುಹಮ್ಮದ್ ಬಿನ್ ಇಬ್ರಾಹೀಮ್‌ರವರ ಬಳಿ ಒಂದಾಗಿ ಕಳಿಯುತ್ತಿದ್ದೆವು" ಎಂದರು.

ನಾನು ಆಶ್ಚರ್ಯದಿಂದ ಅವರನ್ನೇ ದೃಷ್ಟಿಸತೊಡಗಿದೆ. ಅವರು ಆ ಮಾತುಗಳನ್ನು ಹೇಳಿ ಅತೀವ ಸಂತೋಷಗೊಂಡಿದ್ದರು. ಮುಖವು ಅರಳಿದ ಕಮಲದಂತೆ ಮಿನುಗುತ್ತಿತ್ತು. ಅವರಿಗೆ ಯಾವುದೊ ಕಾಲದಲ್ಲಿ ಒಂದು ಯಶಸ್ವೀ ವ್ಯಕ್ತಿಯ ನಿಕಟತೆ ಪ್ರಾಪ್ತವಾಗಿತ್ತೆಂಬ ಅಂಶವು ಅತೀವ ಹೆಮ್ಮೆಯ ವಿಷಯವಾಗಿತ್ತು. ಆದರೆ ನನ್ನೊಳಗೆ ನಾನು ಈ ವ್ಯಕ್ತಿಯ ದುರಾದೃಷ್ಟವನ್ನು ಹಳಿಯುತ್ತಿದ್ದೆ. "ಹೇ ದುರ್ಬಲ ಮನುಷ್ಯನೇ! ನೀನೇಕೆ ಇಬ್ನ್ ಬಾಝ್‌ರಂತೆ ಯಶಸ್ವೀ

ವ್ಯಕ್ತಿಯಾಗಲಿಲ್ಲ? ನಿಮಗಂತೂ ದಾರಿಯೂ ಸ್ಪಷ್ಟವಾಗಿ ತಿಳಿದಿತ್ತು. ಮತ್ತೇಕೆ ನೀನು ನನ್ನ ಪಯಣವನ್ನು ಮೊಟಕುಗೊಳಿಸಿದ್ದು?

ಇಬ್ನ್ ಬಾರ್ಝ್ ನಿಧನ ಹೊಂದಿದಾಗ ಮಿಂಬರ್ ಮತ್ತು ಮೆಹರಾಬ್ ಕಣ್ಣೀರು ಸುರಿಸುತ್ತಿರುವಂತೆಯೂ, ಲೈಬ್ರೆರಿ ರೋಧಿಸುತ್ತಿರುವಂತೆಯೂ ಇಡೀ ವಿಶ್ವವೇ ಶೋಕಾಚರಿಸುತ್ತಿರುವಂತೆಯೂ ಭಾಸವಾಯಿತು. ಅದೇ ಈಗ ನಿನಗೆ ಮರಣ ಸಂಭವಿಸಿದರೂ ನಿನಗಾಗಿ ಯಾರು ಕಣ್ಣೀರು ಸುರಿಸುತ್ತಾರೆ? ಯಾರಾದರೂ ಅಳುವವರಿದ್ದರೂ ಅದು ಕೇವಲ ಕರುಣೆಯ ಕಣ್ಣೀರಷ್ಟೇ ಆಗಿರುವುದು.

ನಮ್ಮ ಪೈಕಿ ಪ್ರತಿಯೊಬ್ಬರೂ ಯಾವಾಗಲಾದರೊಮ್ಮೆ ಇಂತಿಂತಹಾ ದೊಡ್ಡ ವ್ಯಕ್ತಿ ನನ್ನ ಸಂಗಡಿಗರಾಗಿದ್ದರೆಂದೋ, ಸಹಪಾಠಿಯಾಗಿದ್ದರೆಂದೋ, ಸಹವರ್ತಿಯಾಗಿದ್ದರೆಂದೊ ಗುನುಗುಟ್ಟುವುದಿದೆ. ಇಂತಹಾ ವಿಷಯವನ್ನು ಹೇಳಿ ಹೆಮ್ಮೆಪಟ್ಟುಕೊಳ್ಳುವುದು ಸರಿಯಲ್ಲ. ನೀವೂ ಅವರಷ್ಟೇ ಸಾಧನೆ ಮಾಡಿದರಷ್ಟೇ ಹೆಮ್ಮೆಪಟ್ಟುಕೊಳ್ಳಲು ಅರ್ಹರಾಗಿರುತ್ತೀರಿ.

ನಾವು ಪ್ರತಿಯೊಬ್ಬರೂ ಧೈರ್ಯವಂತರಾಗಬೇಕು ಮತ್ತು ಶ್ರಮಜೀವಿಗಳಾಗಿ ಬಾಳಬೇಕು ಮತ್ತು ನಮ್ಮೊಳಗೆ ಅಂತರ್ಗತವಾಗಿರುವ ಪ್ರತಿಭೆಗಳನ್ನು ಹುಡುಕಿ ತೆಗೆದು ಅದಕ್ಕೆ ಜೀವ ಕೊಟ್ಟು ಮುಂದಿನ ಪೀಳಿಗೆಯಲ್ಲಿ ಸ್ಫೂರ್ತಿ ತುಂಬುವ ಸೆಲೆಯಾಗಿ ಮಾರ್ಪಡಿಸಬೇಕು. ಜೀವನವನ್ನು ಅನುಗ್ರಹವೆಂದು ಸ್ವೀಕರಿಸಿಕೊಂಡು ಅದನ್ನು ಸಾರ್ಥಕಪಡಿಸಿಕೊಳ್ಳುವ ನಿಟ್ಟಿನಲ್ಲಿ ಪ್ರಮಾಣ ಬದ್ಧರಾಗಬೇಕು.

ಇದಕ್ಕಾಗಿ ಮುಖಕ್ಕೆ ಗಂಟು ಹಾಕಿಕೊಳ್ಳುವುದನ್ನು ತೊರೆದು ಮಂದಹಾಸ ಬೀರುವುದನ್ನು ಕಲಿಯಬೇಕು. ಕಷ್ಟಕಾರ್ಪಣ್ಯಗಳ ಮುಳ್ಳಿನ ರಾಶಿಯಲ್ಲಿ ಮಲಗಿದ್ದರೂ ಹೂವಿನ ಹಾಸಿಗೆಯಲ್ಲಿ ಮೈಚಾಚಿಕೊಂಡಂತೆ ಸಂತೃಪ್ತಿ ಸೂಚಿಸಬೇಕು. ಜಿಪುಣತನವನ್ನು ಒದ್ದೋಡಿಸಿ ಹೃದಯ ವೈಶಾಲ್ಯತೆಯನ್ನು ಮೈಗೂಡಿಸಿಕೊಳ್ಳಬೇಕು. ಕೋಪವನ್ನು ನಿಯಂತ್ರಿಸಲು ಕಲಿಯಬೇಕು ಮತ್ತು ಅದನ್ನು ಸ್ಫೂರ್ತಿಯಾಗಿಯೂ ಆವೇಶವಾಗಿಯೂ ಬದಲಿಸಿಕೊಳ್ಳಬೇಕು. ದುಃಖ ದುಮ್ಮಾನಗಳ ಅಂಧಕಾರದಲ್ಲಿ ಸಂತೋಷದ ಕಿರಣವನ್ನು ಹುಡುಕುವ ಪ್ರಯತ್ನ ಮಾಡಬೇಕು. ನಮ್ಮನ್ನು ನಾವು ಸುದೃಢ ವಿಶ್ವಾಸ, ಆತ್ಮಸ್ಥೈರ್ಯ, ದೃಢ ಸಂಕಲ್ಪಗಳೆಂಬ ಆಯುಧಗಳಿಂದ ಸಮರ ಸನ್ನದ್ಧಗೊಳಿಸಬೇಕು. ಜೀವನವನ್ನು ಪ್ರೀತಿಸಬೇಕು. ಅದರ ಸವಿ ಅನುಭವಿಸಬೇಕು. ಜೀವನ ಕ್ಷಣಿಕವಾಗಿದೆ. ಅದನ್ನು ನಿರರ್ಥಕ ಪ್ರವರ್ತನೆಗಳಿಂದ, ಗೊತ್ತು-ಗುರಿ ಇಲ್ಲದ ವಿಧಾನಗಳಿಂದ ವ್ಯರ್ಥಗೊಳಿಸಬಾರದು. ಇಲ್ಲಿ ಉಳಿದುಕೊಳ್ಳುವ ಪ್ರಶ್ನೆ ಇದೆಲ್ಲ ಹೇಗೆ ಸಾಧ್ಯವೆನ್ನುವುದಾಗಿದ್ದರೆ. ನಾನೀ ಅಂಕಣವನ್ನು ಈ ಪ್ರಶ್ನೆಗೆ ಉತ್ತರವಾಗಿಯೇ ಬರೆಯುತ್ತಿದ್ದೇನೆ. ಪ್ರತಿ ತಿಂಗಳು ಈ ಅಂಕಣದಲ್ಲಿ ಸಂಧಿಸೋಣ. ಇನ್‌ಷಾಅಲ್ಲಾಹ್ ಶೀಘ್ರವೇ ಗುರಿ ಸಾಧನೆಯಾದೀತು.

ಸಾರಾಂಶ : **“ದೃಢ ಸಂಕಲ್ಪದಿಂದ ತನ್ನ ಪ್ರತಿಭೆಗೆ ಜೀವ ತುಂಬಿ ಅದರಿಂದ ಪೂರ್ಣ ಪ್ರಮಾಣದ ಲಾಭ ಪಡೆಯುವವನೇ ಧೀರ.”**

# ಇನ್ನು ನಮಗೆ ಕಲಿಯಲಿರುವುದೇನು?

ಸಾಮಾನ್ಯವಾಗಿ ಜನರ ಸುಖ-ದುಃಖಗಳಿಗೆ ಕಾರಣಗಳು ಸಮಾನವಾಗಿರುವಂತೆ ಕಂಡು ಬರುತ್ತದೆ. ಹಣ-ಸಂಪತ್ತಿನ ಹೆಚ್ಚಳ, ಉಪಜೀವನದ ಯಾವುದಾದರೂ ವಿಭಾಗದಲ್ಲಿ ಬಡ್ತಿ ಅಥವಾ ಶೋಭಿಸುವ ಮಹಲುಗಳನ್ನು ಕಂಡು ಎಲ್ಲರೂ ಸಂತೋಷವನ್ನು ವ್ಯಕ್ತಪಡಿಸುತ್ತಾರೆ. ಹಳೆಯ ರೋಗ ಒಂದು ವಾಸಿಯಾದರೆ, ಹೃದಯಾಂತರಾಳದಲ್ಲಿ ಅಡಗಿಕೊಂಡಿದ್ದ ಅಭಿಲಾಶೆಗಳು ಈಡೇರಿದಾಗಲೂ ಜನರು ಸಂತೋಷ ಮತ್ತು ಸಡಗರದಿಂದ ಭಾವಪರವಶರಾಗಿ ಬಿಡುತ್ತಾರೆ. ಇನ್ನೊಬ್ಬರ ಮುಖದಲ್ಲಿ ಮಂದಹಾಸವನ್ನು ಕಂಡು ಅಸೂಯೆಪಟ್ಟು ಹೃದಯವನ್ನು ಕಲುಷಿತಗೊಳಿಸಿಕೊಳ್ಳುವುದಕ್ಕಿಂತ ಹೃದಯವನ್ನು ಅರಳಿಸಿಕೊಂಡು ತಣ್ಣನೆಯ ಒಂದು ಮುಗುಳುನಗು ಬೀರಿದರೂ ಅವರಿಗೆ ಉಂಟಾಗುವ ಸಂತೋಷಕ್ಕೆ ಪಾರವೇ ಇರುವುದಿಲ್ಲ.

ಇನ್ನು ಇದಕ್ಕೆ ವ್ಯತಿರಿಕ್ತವಾಗಿ ಜೀವನದಲ್ಲಿ ಏನಾದರೂ ಕೇಡು ಸಂಭವಿಸಿದರೆ, ಬಡತನ ಮತ್ತು ದಾರಿದ್ರ್ಯ ಎದುರಾದರೆ, ರೋಗ ಬಾಧಿಸಿದರೆ ಅಥವಾ ಅಪಮಾನ ದೂಷಣೆ ಮತ್ತು ಮುಖ ಭಂಗದ ಪ್ರಸಂಗಗಳು ಎದುರಾದರೆ ಎಲ್ಲರೂ ಧೃತಿಗೆಡುತ್ತಾರೆ ಮತ್ತು ದುಃಖ ಮತ್ತು ವ್ಯಥೆಯ ಸಾಗರದಲ್ಲಿ ಮುಳುಗಿ ಬಿಡುತ್ತಾರೆ. ಎಲ್ಲಿಯ ತನಕ ಈ ಅವಸ್ಥೆಯು ಬದಲಾಗುವುದಿಲ್ಲವೋ ಅಲ್ಲಿ ತನಕ ಚಿಂತೆ ಮತ್ತು ಆತಂಕ ಅವರನ್ನು ಬಿಟ್ಟು ಕದಲುವುದಿಲ್ಲ.

ಬನ್ನಿ! ಸಂತೋಷವನ್ನು ಶಾಶ್ವತಗೊಳಿಸುವ, ನಗುವಿನ ಬುಗ್ಗೆಗಳನ್ನು ಚಿರಸ್ಥಾಯಿಯಾಗಿ ಉಳಿಸಿ ಕೊಳ್ಳುವ, ದುಃಖ-ಪರಿತಾಪಗಳ ಮೇಲೆ ಹಿಡಿತ ಸಾಧಿಸಬಲ್ಲಂತಹ ದಾರಿಯಾವುದಾದರೂ ಇದೆಯೇ ಎಂದು ಅನ್ವೇಷಿಸೋಣ. ಮನುಷ್ಯನು ಐಹಿಕವಾದ ತಾತ್ಪರ್ಯಗಳನ್ನು, ಸುಖ-ಭೋಗಗಳನ್ನು ಹುಡುಕುತ್ತಾ ಅಂಡಲೆಯುವುದು ಅವನ ಪ್ರಾಕೃತಿಕವಾದ ದೌರ್ಬಲ್ಯವೇ ಆಗಿದೆ. ಈ ದೌರ್ಬಲ್ಯವು ನಿಮಗೆ ಮಾತ್ರ ಸೀಮಿತವಲ್ಲ. ಎಲ್ಲರೂ ಈ ದೌರ್ಬಲ್ಯವನ್ನು ಹೊಂದಿದವರೇ ಆಗಿದ್ದಾರೆ. ಆದರೆ ನನ್ನ ಪ್ರಶ್ನೆ ಏನೆಂದರೆ, ನಾವು ನಮ್ಮ ಜೀವನದಲ್ಲಿ ಎದುರಾಗುವ ಸಂಕಷ್ಟಗಳು, ದುಃಖ ದುಗುಡಗಳಿಗೆ ಹಲವೊಮ್ಮೆ ಅದರ ವಸ್ತುಸ್ಥಿತಿಗಿಂತ ಹೆಚ್ಚಿನ ಮಹತ್ವವನ್ನು ಏಕೆ ಕಲ್ಪಿಸುತ್ತೇವೆ ಎನ್ನುವುದಾಗಿದೆ. ಕೆಲವೊಮ್ಮೆ ಕ್ಷುಲ್ಲಕ ವಿಷಯಗಳಿಗಾಗಿ ಹಲವಾರು ದಿನ ವ್ಯಾಕುಲಗೊಂಡು ಜೀವನದ ಅತ್ಯಮೂಲ್ಯ ಕ್ಷಣಗಳನ್ನು ವ್ಯರ್ಥ ಕೈ ಚೆಲ್ಲಿ ಬಿಡುತ್ತೇವೆ. ವಾಸ್ತವದಲ್ಲಿ ವಿಷಯವು ಅಷ್ಟೊಂದು ಗಂಭೀರವಾಗಿರುವುದೇ ಇಲ್ಲ. ಇದಕ್ಕಿಂತ ಗಂಭೀರ ಸಮಸ್ಯೆಗಳನ್ನು ಕೂಡಾ ಕ್ಷಣಾರ್ಧದಲ್ಲಿ ಬಗೆಹರಿಸ ಬಲ್ಲಂತಹಾ ನೈಪುಣ್ಯತೆ ನಮ್ಮಲ್ಲಿ ಅಂತರ್ಗತವಾಗಿದ್ದೂ ಹೀಗೇಕೆ ಸಂಭವಿಸುತ್ತದೆ?

ಒಂದು ವಿಷಯವನ್ನು ಚೆನ್ನಾಗಿ ಮನದಟ್ಟು ಮಾಡಿಕೊಂಡಿರಬೇಕು. ಬೇಸರ-ಕಳವಳ, ಚಿಂತೆ-ಅಸಮಾಧಾನ, ಸಿಟ್ಟು-ಸಿಡುಕುಗಳು ಆಗಾಗ ಹೃದಯದ ವಿವಿಧ ದ್ವಾರಗಳಿಂದ ಒಳಪ್ರವೇಶಿಸುತ್ತಲೇ ಇರುತ್ತದೆ. ಇದಕ್ಕೆ ನಮ್ಮ ಹೃದಯವು ಅನುಮತಿಸಿದರೂ -ಅನುಮತಿಸದೇ ಇದ್ದರೂ ಇದು ಕದ್ದು-ಮುಚ್ಚಿ ಒಳ ನುಸುಳಿ ಬಿಡುತ್ತದೆ. ಇವುಗಳು ಒಳಪ್ರವೇಶಿಸಿದ ಮಾತ್ರಕ್ಕೆ ಎಲ್ಲವೂ ಬಿಗಡಾಯಿಸಬೇಕೆಂದಿಲ್ಲ. ಇದು ಹೃದಯದ ಒಂದು ದ್ವಾರದಿಂದ ಒಳನುಗ್ಗಿದ್ದರೆ, ಇವುಗಳನ್ನು ಹೊರದಬ್ಬಲು ಸಾವಿರಾರು ಮಾರ್ಗಗಳು ಇದ್ದೇ ಇರುತ್ತದೆ.

ಮುಂದೆ ನಾವು ಆ ಮಾರ್ಗಗಳ ಕುರಿತು ಅರಿತುಕೊಳ್ಳಲು ಪ್ರಯತ್ನಿಸಿಸೋಣ.

ಜೀವನದಲ್ಲಿ ನಾವು ಅದೆಷ್ಟೊ ಸಲ `ಸ್ನೇಹ ಜೀವ'ಗಳಾದ ಕುಶಲ ಹೃದಯಸ್ಥರನ್ನು ಸಂಪರ್ಕಿಸಿರುತ್ತೇವೆ. ಜನರು ಇಂತಹ ಮನೋಭಾವದ ಜನರ ಒಡನಾಟದಿಂದ ಹರ್ಷಗೊಳ್ಳುತ್ತಾರೆ. ಇವರೊಂದಿಗೆ ಕೂಡಿ-ಕಲೆತು ತಮ್ಮ ಹೃದಯವನ್ನು ಹಗುರಗೊಳಿಸಿಕೊಳ್ಳುತ್ತಾರೆ. ನೀವೆಂದಾದರೂ ಜನರ ಹೃದಯ ಅರಳಿಸಲು-ಸಂಕಷ್ಟಗಳನ್ನು ನೀಗಿಸಲು ಸಮಸ್ಯೆಗಳನ್ನು ಪರಿಹರಿಸಲು, ಪ್ರೀತಿ-ವಿಶ್ವಾಸ-ಸಾಮರಸ್ಯಗಳನ್ನುಂಟು ಮಾಡಲು ಪ್ರಯತ್ನಿಸಿದ್ದೀರಾ..? ಜನರ ಹೆಗಲಿನ ಭಾರವನ್ನು ಕಡಿಮೆ ಮಾಡಲು ಶ್ರಮಿಸಿದ್ದೀರಾ..? ಇಷ್ಟಕ್ಕೂ ಇಂತಹ ಕಾರ್ಯಗಳಿಂದ ವಿದೂರ ಕಾಯ್ದುಕೊಂಡು ಕುಳಿತಿರಲು ಕಾರಣವಾದರೂ ಏನು? ಇತರರು ಇಂತಹಾ ಕಾರ್ಯಗಳನ್ನು ಮಾಡುವುದನ್ನುಕಂಡರೆ ನೀವು ಹೃತ್ಪೂರ್ವಕ ಅವರನ್ನು ಹೊಗಳುತ್ತೀರಿ... ಪ್ರಶಂಸೆ ಮಾಡುತ್ತೀರಿ. ಅವರ ಗುಣಗಾನ ಮಾಡುತ್ತೀರಿ. ಆದರೆ ಪರೋಪಕಾರಿ, ಜನಸೇವಾ ಕಾರ್ಯಗಳಲ್ಲಿ, ಜನರ ಕಣ್ಣೀರೊರೆಸುವ ಚಟುವಟಿಕೆಗಳಲ್ಲಿ ದೂರ ಉಳಿದು ಇತರರು ನಿಮ್ಮ ಬಗ್ಗೆ ಆಶ್ಚರ್ಯಪಡುವಂತೆ ಮಾಡುತ್ತೀರಿ! ಹೀಗೇಕೆ..?

ಸ್ನೇಹ ಕೂಟ ಒಂದರಲ್ಲಿ ನಿಮ್ಮ ಮಿತ್ರನೋರ್ವನು ಮಾತಾಡುತ್ತಿದ್ದರೆ ಇತರರೆಲ್ಲರೂ ಕಿವಿ ನಿಮಿರಿಸಿ ಕೇಳುತ್ತಾರೆ ಮತ್ತು ಆತನ ಧ್ವನಿ ಉಪಸ್ಥಿತರಲ್ಲಿ ಸ್ಪಂದನವನ್ನೂ ಆಹ್ಲಾದವನ್ನೂ ಉಂಟು ಮಾಡುತ್ತದೆ. ಮತ್ತು ಅವರೆಲ್ಲರೂ ಆತನಿಂದ ಪ್ರಭಾವಿತರಾಗಿ ಆತನ ಗುಣಗಾನ ಮಾಡತೊಡಗುತ್ತಾರೆ. ಅದೇ ನೀವು ಜನರ ಮಧ್ಯೆ ಎದ್ದು ನಿಂತು ಮಾತನಾಡ ತೊಡಗಿದರೆ ಜನರು ಮುಖ ತಿರುಗಿಸ ತೊಡಗುತ್ತಾರೆ ಅಥವಾ ಅವರ ಗಮನವು ಎಲ್ಲೆಲ್ಲೊ ಹರಿದಾಡತೊಡಗುತ್ತದೆ. ಅವರು ಅಕ್ಕ-ಪಕ್ಕದವರೊಂದಿಗೆ ಗುನುಗುಟ್ಟ ತೊಡಗುತ್ತಾರೆ. ಏಕೆ ಹೀಗಾಗುತ್ತದೆ..? ಒಂದೊಮ್ಮೆ ನೀವು ನಿಮ್ಮ ಮಿತ್ರನಿಗಿಂತ ಹೆಚ್ಚು ತಿಳುವಳಿಕೆ ಉಳ್ಳವರಾಗಿ ಶೈಕ್ಷಣಿಕ ಕ್ಷೇತ್ರದಲ್ಲಿ ಆತನಿಗಿಂತ ಹಿರಿಯ ಪದವಿಯನ್ನು ಸಂಪಾದಿಸಿದವರಾಗಿದ್ದರೂ ನೀವು ಜನರ ಗಮನ ಸೆಳೆಯಲು ವಿಫಲರಾಗುವುದು ಹೇಗೆ? ಈ ನಿಟ್ಟಿನಲ್ಲಿ ನಿಮ್ಮ ಮಿತ್ರನ ಯಶಸ್ಸಿನ ಹಿಂದಿನ ಗುಟ್ಟೇನು?

ಒಬ್ಬ ತಂದೆಯು ಅವನ ಮಕ್ಕಳ ಪ್ರೀತ್ಯಾದರಗಳಿಗೆ ಪಾತ್ರನಾಗುತ್ತಾನೆ. ಅವನು ಮನೆ ಪ್ರವೇಶಿಸಿದಂತೆ ಮಕ್ಕಳು ಅವನನ್ನು ಸುತ್ತುವರಿದು ಸಂತೋಷವನ್ನು ವ್ಯಕ್ತಪಡಿಸುತ್ತಾರೆ.

ಇನ್ನೊಬ್ಬ ನತದೃಷ್ಟ ತಂದೆ ಇದ್ದಾನೆ, ಅವನು ತನ್ನ ಮಕ್ಕಳ ಪ್ರೀತಿಗಾಗಿ ಕಾತರಿಸುತ್ತಿರುತ್ತಾನೆ, ಮಕ್ಕಳು ಅವನಿಂದ ದೂರ ಸರಿಯಲು ಕಾರಣ ಹುಡುಕುತ್ತಿರುತ್ತಾರೆ. ಹೀಗೇಕೆ..?ಇಬ್ಬರೂ ಅವರವರ ಮಕ್ಕಳಿಗೆ ಜನ್ಮಕೊಟ್ಟವರಾಗಿದ್ದಾಗ್ಯೂ ಹೀಗೇಕೆ ಸಂಭವಿಸುತ್ತದೆ?

ಈ ಪುಸ್ತಕದಲ್ಲಿ ನಾವು ಜೀವವನ್ನು ಮಾಧುರ್ಯಗೊಳಿಸುವುದು ಹೇಗೆ? ಜನರ ಗಮನ ಸೆಳೆಯುವ ವಿಧಾನಗಳು ಯಾವುವು? ನಮ್ಮ ಮಾತುಗಳನ್ನು ಆಕರ್ಷಕಗೊಳಿಸುವುದು ಹೇಗೆ? ಎಂಬುವುದರ ಜೊತೆಗೆ ಸಮಾಜದಲ್ಲಿ ದುಷ್ಟರು ಮತ್ತು ಸಮಾಜ ಕಂಟಕರ ತಂಟೆ ಮತ್ತು ತಕರಾರುಗಳಿಂದ ಸುರಕ್ಷಿತರಾಗಿ ಬಾಳುವುದು ಹೇಗೆ? ಇವರೊಂದಿಗೆ ಲೌಕಿಕ ವ್ಯವಹಾರಗಳನ್ನು ನಡೆಸುವುದು ಹೇಗೆ? ಇತ್ಯಾದಿ. ಇತ್ಯಾದಿಗಳು ಕುರಿತು ಅರಿತುಕೊಳ್ಳಲು ಪ್ರಯತ್ನಿಸೋಣ.

ಹಾಗಾದರೆ ಬನ್ನಿ, ನಾವು ನಿಮಗೆ ಸ್ವಾಗತ ಕೋರುತ್ತೇವೆ.

ಸಾರಾಂಶ : **"ಜನರ ಮೆಚ್ಚಿಗೆ ಗಳಿಸುವುದಷ್ಟೇ ಯಶಸ್ವಿಯ ಮಾನದಂಡವಲ್ಲ ಸ್ವಯಂ, ಪರಿಣಿತರಾಗಿ ಆ ಮೂಲಕ ಜನ ಮಾನಸದಲ್ಲಿ ಸ್ಥಾನಪಡೆದುಕೊಳ್ಳುವುದೇ 'ಯಶಸ್ವಿ'ಯಾಗಿದೆ."**

# ಪರಿಣಿತರ ಅನ್ವೇಷಣೆ ಏಕೆ..?

ಒಂದು ದಿನ ನಾನು ಕೆಲವು ಜನರು ಸೇರಿಕೊಂಡಿದ್ದ ಸಭೆಗೆ ಹೋಗಿದ್ದೆ ಅಲ್ಲಿ ನಾನೊಂದು ಭಾಷಣ ನೀಡಬೇಕಾಗಿತ್ತು.

ನಾನು ನನ್ನ ಭಾಷಣ ಮುಗಿಸಿ ವಿರಮಿಸಿದಾಗ ನನ್ನ ಭಾಷಣ ಆಲಿಸಲು ಅಲ್ಲಿ ಬಂದು ಸೇರಿಕೊಂಡಿದ್ದ ಜನರ ಪೈಕಿ ಓರ್ವ ಶಾಲಾ ಅಧ್ಯಾಪಕರು ನನ್ನ ಬಳಿ ಬಂದು “ಕೆಲವು ವಿದ್ಯಾರ್ಥಿಗಳ ಖರ್ಚುವೆಚ್ಚಗಳ ಹೊಣೆ ನಿರ್ವಹಿಸಲು ನೀವು ನಮಗೆ ಸಹಾಯ ಮಾಡಬೇಕು” ಎಂದರು.

ನಾನು ವಿಚಾರಿಸಿದೆ ‘ವಿಚಿತ್ರವಾಗಿದೆ ನಿಮ್ಮ ಮಾತು! ಶಾಲೆಗಳೆಲ್ಲವೂ ಇಲ್ಲಿ ಸರಕಾರದ್ದಾಗಿದ್ದರೂ ಶಿಕ್ಷಣಕ್ಕೆ ಹಣ ನೀಡಬೇಕೇ?

“ಅದೆಲ್ಲವೂ ನೀವು ಹೇಳುವಂತೆಯೇ ಸರಿಯಾಗಿದೆ. ಆದರೆ, ನಾವು ವಿಶ್ವವಿದ್ಯಾನಿಲಯಗಳಲ್ಲಿ ಕಲಿವ ಕೆಲವು ಮಕ್ಕಳ ಹೊಣೆ ವಹಿಸಿಕೊಂಡಿರುತ್ತೇವೆ” ಎಂದು ಅವರು ಸಬೂಬು ಹೇಳಿದರು.

ಅದಕ್ಕೆ ನಾನು ಹೇಳಿದೆ “ವಿಶ್ವವಿದ್ಯಾಲಯಗಳ ಸ್ಥಿತಿಯೂ ಅಷ್ಟೇ, ಅದೇನು ಸರಕಾರದ್ದಲ್ಲವೇ? ಅಲ್ಲಂತೂ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವೂ ದೊರಕಬೇಕು” ಕೊನೆಗೆ ಅವರು ಹೇಳಿದರು, “ನಾನು ನಿಮಗೆ ವಾಸ್ತವ ಸಂಗತಿಯನ್ನು ತಿಳಿಸುತ್ತೇನೆ”

“ನಮ್ಮಲ್ಲಿ ಸೆಕೆಂಡರಿ ಕಲಿಯುವ ವಿದ್ಯಾರ್ಥಿಗಳಲ್ಲಿ ಹಲವರು ತಮ್ಮ ವಾರ್ಷಿಕ ಪರೀಕ್ಷೆಗಳಲ್ಲಿ ಶೇಕಡಾ 99 ಅಂಕ ಗಳಿಸಿ ಉತ್ತೀರ್ಣರಾಗುತ್ತಾರೆ. ಆ ಪೈಕಿ ಕೆಲವರಲ್ಲಂತೂ ಎಂತಹಾ ಬುದ್ಧಿ ಶಕ್ತಿ ಮತ್ತು ಪ್ರತಿಭೆಗಳು ಅಂತರ್ಗತವಾಗಿರುತ್ತದೆಂದರೆ, ಅದನ್ನು ಸಮುದಾಯದಲ್ಲಿ ಹಂಚಿದರೆ ಅದು ಸಂಪೂರ್ಣ ಸಮುದಾಯದ ಉನ್ನತಿಗೆ ಪರ್ಯಾಪ್ತವೆನಿಸೀತು. ಇಂತಹಾ ವಿದ್ಯಾರ್ಥಿಗಳು ತಮ್ಮ ಶಾಲಾ ವಿದ್ಯಾಭ್ಯಾಸದ ನಂತರ ಪಟ್ಟಣಗಳಿಗೆ ತೆರಳಿ ಮೆಡಿಕಲ್, ಇಂಜಿನಿಯರಿಂಗ್, ಕಾನೂನು ಅಥವಾ ಕಂಪ್ಯೂಟರ್ ವಿಭಾಗಗಳಲ್ಲಿ ಉನ್ನತ ಶಿಕ್ಷಣಗಳನ್ನು ಪಡೆಯಲು ಬಯಸುತ್ತಾರೆ, ಆದರೆ, ಅವರ ಹೆತ್ತವರು ಬಡತನದ ಕಾರಣಕ್ಕಾಗಿ ಅವರನ್ನು ತಡೆಯುತ್ತಾ” ನೀನು ಕಲಿತಿದ್ದು ಸಾಕು, ಇನ್ನು ಆರಾಮವಾಗಿ ಮನೆಯಲ್ಲಿದ್ದು ಕುರಿ ಮೇಯಿಸುವ ಕೆಲಸ ಮಾಡು”

“ಏನು? ಕುರಿ ಮೇಯಿಸುವುದೇ...?” ನಾನು ಆಶ್ಚರ್ಯದಿಂದ ಕೇಳಿದೆ “ಹೌದು! ಹೌದು! ಕುರಿ ಮೇಯಿಸುವುದು”ಎಂದು ಅವರು, ಮುಂದುವರಿಸಿದರು.

“ಅದರಂತೆ ಬಾಲಕರು ತಮ್ಮ ವಿದ್ಯಾಭ್ಯಾಸಗಳನ್ನು ತೊರೆದು ತನ್ನ ತಂದೆಯೊಂದಿಗೆ ಕುರಿ ಮೇಯಿಸುವ ಕೆಲಸದಲ್ಲಿ ನಿರತರಾಗಿ ಬಿಡುತ್ತಾರೆ. ಇದರ ಪರಿಣಾಮವಾಗಿ ಅವನಲ್ಲಿರುವ ಗ್ರಾಹ್ಯಶಕ್ತಿ-ಬುದ್ಧಿ ಮತ್ತು ಪ್ರತಿಭೆಗಳು ಅವನೊಳಗೇ ಬಂಧಿಯಾಗಿ ನಾಶಹೊಂದುತ್ತದೆ. ಕಾಲ ಉರುಳುತ್ತದೆ, ಅವನು ಕುರಿ ಮಂದೆಗಳೊಂದಿಗೆ ಜೀವನ ಸಾಗಿಸುತ್ತಾ ಹೋಗುತ್ತಾನೆ. ಈ ಮಧ್ಯೆ ಅವನಿಗೆ ಮದುವೆಯಾಗುತ್ತದೆ. ಮಕ್ಕಳು ಹುಟ್ಟುತ್ತಾರೆ. ಅವರು ದೊಡ್ಡವರಾಗುತ್ತಾರೆ ಅವರೂ ತಮ್ಮ ತಂದೆಯ ಕುರಿಮಂದೆಯ ನಡುವೆ ತಮ್ಮ ಜೀವನವನ್ನು ಕಂಡುಕೊಳ್ಳಲು ನಿರ್ಬಂಧಿತರಾಗುತ್ತಾರೆ.”

“ಈ ಗಂಭೀರ ಸಮಸ್ಯೆಗೆ ಪರಿಹಾರವೇನು? ತಾವು ಈ ಕುರಿತು ಏನು ಆಲೋಚನೆ ಮಾಡಿದ್ದೀರಿ? ಇದು ನನ್ನ ಪ್ರಶ್ನೆಯಾಗಿತ್ತು. ಅವರು ಹೇಳಿದರು, “ನಮ್ಮ ಬಳಿ ಈ ಸಮಸ್ಯೆಯ ಪರಿಹಾರಕ್ಕೆ ಇದಕ್ಕಿಂತ ಭಿನ್ನವಾದ ಬೇರೆ ದಾರಿ ಇಲ್ಲ. ನಾವು ಇಂತಹಾ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಗುರುತಿಸಿಕೊಂಡು ಅವರ ಹೆತ್ತವರನ್ನು ಭೇಟಿಯಾಗುತ್ತೇವೆ. ಇಂತಹಾ ವಿದ್ಯಾರ್ಥಿಗಳು ಸಮಾಜಕ್ಕೆ-ಸಮುದಾಯಕ್ಕೆ ಮತ್ತು ದೇಶಕ್ಕೆ ಅನರ್ಘ್ಯ ನಿಧಿಗಳಾಗಬಲ್ಲರೆಂದು ಅವರಿಗೆ ಮನವರಿಕೆ ಮಾಡಿಕೊಡಲು ಪ್ರಯತ್ನಿಸುತ್ತೇವೆ ಮತ್ತು ಅವರ ಕುರಿಮೇಯಿಸಲು ಕೆಲಸಕ್ಕೆ ಬೇರೆ ಆಳನ್ನು ಅನ್ವೇಷಿಸುವಂತೆ ಹೇಳಿ ಆ ಆಳಿನ ಸಂಬಳಕ್ಕೆ ಬೇಕಾಗುವ ಮೊತ್ತವನ್ನು ಭರಿಸುವ ಹೊಣೆಯನ್ನು ನಾವು ಹೊತ್ತುಕೊಳ್ಳುತ್ತೇವೆ. ಮಾತ್ರವಲ್ಲದೆ, ವಿದ್ಯಾರ್ಥಿ ತನ್ನ ಉನ್ನತ ಶಿಕ್ಷಣ ಮುಗಿಸುವ ವರೆಗಿನ ಅವನ ಖರ್ಚು ವೆಚ್ಚಗಳನ್ನೂ ಭರಿಸುವ ವ್ಯವಸ್ಥೆ ಮಾಡುತ್ತೇವೆ”

ಇಷ್ಟು ಹೇಳಿ ಮಾಸ್ಟರ್ ಸ್ವಲ್ಪ ಸಮಯ ಮೌನ ತಾಳಿದರು ಮತ್ತು ತಲೆ ತಗ್ಗಿಸಿ ಕುಳಿತುಕೊಂಡು ಬಿಟ್ಟರು. ನಂತರ ಏಕಾಏಕಿ ಏರಿದ ಸ್ವರದಲ್ಲಿ ಹೇಳಿದರು “ಬಡಮಕ್ಕಳಲ್ಲಿ ಹುದುಗಿರುವ ಪ್ರತಿಭೆ ಮತ್ತು ವಿಶೇಷ ಪ್ರಜ್ಞೆ ಅವರ ಹೃದಯದೊಳಗೇ ಎಷ್ಟು ಮಾತ್ರಕ್ಕೂ ಉಸಿರುಕಟ್ಟಿ ಸಾಯಬಾರದು. ಅವರು ಜೀವನ ಪರ್ಯಂತ ಹತಭಾಗ್ಯರಾಗಿ ಕೊರಗಬಾರದು.

ಶಾಲಾ ಅಧ್ಯಾಪಕರು ಅಲ್ಲಿಂದ ನಿರ್ಗಮಿಸಿದ ಬಳಿಕ ನಾನು ಅವರಾಡಿದ ಮಾತುಗಳ ಕುರಿತು ಚಿಂತನೆ ನಡೆಸಿದೆ. ಅಂತಿಮವಾಗಿ ನನಗನಿಸಿದ್ದಿಷ್ಟು, ಯಶಸ್ಸಿನ ಉತ್ತುಂಗಕ್ಕೆ ತಲುಪಬೇಕಾದರೆ ಆಯಾ ವಿಭಾಗದಲ್ಲಿ ಅನುಭವವಿರುವ, ಪರಿಣಿತ ಸಂಪನ್ಮೂಲ ವ್ಯಕ್ತಿಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳಬೇಕಾಗಿದೆ. ಅದೇ ಪ್ರಕಾರ ತಮ್ಮಲ್ಲಿ ಸಾಧ್ಯಂತ ಗ್ರಾಹ್ಯಶಕ್ತಿಯನ್ನೂ, ಪ್ರತಿಭೆಗಳನ್ನೂ ಬೆಳೆಸಿಕೊಳ್ಳಲು ನಿರಂತರ ಪರಿಶ್ರಮಿಸಬೇಕಾಗಿದೆ.

ಹೌದು! ನಾನೀ ವಿಷಯವನ್ನೀಗ ಸವಾಲೆಂಬಂತೆ ಸೂಚಿಸುತ್ತೇನೆ. ನೀವು ಜೀವನದ ಯಾವುದೇ ಕ್ಷೇತ್ರದಲ್ಲಾದರೂ (ಅದು ಶಿಕ್ಷಣ ಅಥವಾ ಸಂಶೋಧನೆಯ ಕ್ಷೇತ್ರವಾಗಿರಲಿ, ಸಂದೇಶ ಪ್ರಚಾರ ಅಥವಾ ಪ್ರಬೋಧನೆಯ ಮೈದಾನವಾಗಿರಲಿ, ವ್ಯಾಪಾರ-ವೃತ್ತಿಯ ರಂಗವಾಗಲಿ, ವೈದ್ಯಕೀಯ ಅಥವಾ ತಂತ್ರ ವಿದ್ಯೆಯ ವಿಭಾಗವೇ ಆಗಿರಲಿ) ಯಶಸ್ಸನ್ನು ಪಡೆಯಲು ಆ ಕ್ಷೇತ್ರದಲ್ಲಿ ಪರಿಣಿತರಾದವರ ಕುರಿತು ಅರಿತುಕೊಳ್ಳಬೇಕು ಮತ್ತು ಅವರಿಂದ ಮಾಹಿತಿ ಪಡೆದುಕೊಳ್ಳಲೇಬೇಕು. ಇದಕ್ಕಾಗಿ ನೀವು ವಿದೂರ ಸಂಚರಿಸಬೇಕಾಗಿಲ್ಲ. ನೀವು ನಿಮ್ಮ ಕುಟುಂಬ ಅಥವಾ ಪರಿಸರದಲ್ಲಿರುವ ಇಂತಹಾ ಪರಿಣಿತರನ್ನು ಕಂಡುಹಿಡಿಯಬೇಕಾಗಿದೆ. ಓರ್ವ ಯಶಸ್ವೀ ತಂದೆ ತನ್ನ ಮಕ್ಕಳೊಂದಿಗೆ ಹೇಗೆ ನಡೆದುಕೊಳ್ಳುತ್ತಾನೆ, ಅಥವಾ ಓರ್ವಳು ವಿಜಯಶಾಲಿ ಗೃಹಿಣಿ ತನ್ನ ಪತಿ ಮತ್ತು ಕುಟುಂಬದೊಂದಿಗೆ ಹೇಗೆ ವರ್ತಿಸುತ್ತಾಳೆ ಮತ್ತು ಯಾವ ರೀತಿ ಅವಳು ಸಂತೃಪ್ತ ಜೀವನ ಸಾಗಿಸುತ್ತಾಳೆ ಎನ್ನುವುದನ್ನು ಅಧ್ಯಯನ ನಡೆಸಬೇಕಾಗಿದೆ. ಇಲ್ಲಿ ಯಶಸ್ವಿ ಅಥವಾ ವಿಜಯಶಾಲಿಗಳೆಂದು ನಾನು ಸೂಚಿಸಿರುವುದು ವಾಸ್ತವದಲ್ಲಿ ಯಶಸ್ಸು ಸಂಪಾದಿಸಿದವರನ್ನಾಗಿದೆಯೇ ಹೊರತು ವಿಜಯಶಾಲಿಗಳ ವೇಷಧರಿಸಿದವರನ್ನೊ ವಿಜಯದ ಭ್ರಮೆ ಅಳವಡಿಸಿಕೊಂಡವರ ಕುರಿತೊ ಅಲ್ಲ.

ನೀವು ಜೀವನದಲ್ಲಿ ಯಶಸ್ಸು ಪಡೆದ ಸರ್ವ ಸಂಪನ್ಮೂಲ ವ್ಯಕ್ತಿಗಳ ಚಾರಿತ್ರ್ಯ ಮತ್ತು ಸ್ವಭಾವಗಳ ಕುರಿತು ಅಧ್ಯಯನ ಮಾಡಿ ನೋಡಿ, ನಾನು ಆತ್ಮವಿಶ್ವಾಸದಿಂದ ಹೇಳಬಲ್ಲೆ. ಅವರಲ್ಲಿ

ಪ್ರತಿಯೊಬ್ಬರು ತನ್ನ ಕಾರ್ಯಕ್ಷೇತ್ರದಲ್ಲಿ ಕೆಲವು ಪ್ರತ್ಯೇಕ ಪಾಂಡಿತ್ಯ ಅಥವಾ ಪರಿಪಕ್ವತೆಯನ್ನು ಉಪಯೋಗಿಸಿ ಆ ಮೂಲಕ ಯಶಸ್ಸಿನ ಅಂತಿಮ ಮೆಟ್ಟಿಲನ್ನು ತಲಪಿರುತ್ತಾರೆ. ಇದು ಕೆಲವೊಮ್ಮೆ ಅವರು ಅರಿತುಕೊಂಡು ಮಾಡಿರಬಹುದು ಅಥವಾ ಅವರು ಅರಿಯದೆ ಮಾಡಿರಲೂ ಬಹುದು.

ಕೆಲವು ಜನರಲ್ಲಿ ಪ್ರಕೃತಿದತ್ತವಾಗಿ ಯಶಸ್ಸು ಸಂಪಾದಿಸುವ ಗುಣ ಸ್ವಭಾವಗಳು ಅಂತರ್ಗತವಾಗಿರುತ್ತದೆ. ಅದು ಅವರ ಕಾರ್ಯವೈಖರಿಯಲ್ಲಿ ಸದಾ ಬಳಕೆಯಾಗುತ್ತಲೇ ಇರುತ್ತದೆ. ಅದೇ ಇನ್ನೂ ಹಲವಾರು ಜನರು ಯಶಸ್ಸು ಗಳಿಸುವ ರೀತಿ-ನೀತಿಗಳನ್ನು, ವಿಧಿ-ವಿಧಾನಗಳನ್ನು ಕಲಿತುಕೊಳ್ಳುತ್ತಾರೆ ಮತ್ತು ಅದನ್ನು ಬಳಸಿಕೊಂಡು ವಿಜಯಶಾಲಿಗಳಾಗುತ್ತಾರೆ.

ಈ ಅಂಕಣದಲ್ಲಿ ನಾವು ಅಂತಹಾ `ವಿಜಯಶಾಲಿ' ಗಳಾದ ಜನರನ್ನು ಗುರುತಿಸಿಕೊಂಡು ಅವರ ಯಶಸ್ವೀ ಜೀವನದ ಹಿಂದಿನ ಗುಟ್ಟನ್ನು ಅಧ್ಯಯನ ನಡೆಸೋಣ ಮತ್ತು ಅವರ ರೀತಿ-ನೀತಿಗಳನ್ನು ಅರಿತುಕೊಳ್ಳಲು ಪ್ರಯತ್ನಿಸೋಣ. ಅವರ ಹೆಜ್ಜೆಗಳನ್ನು ಹಿಂಬಾಲಿಸಿಕೊಂಡು ಅವರ ಅನುಭವಗಳಿಂದ ಪಾಠ ಕಲಿತು ನಾವು ನಮ್ಮ ಕನಸುಗಳನ್ನು ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವೇ ಎಂದೊಮ್ಮೆ ನೋಡೋಣ.

ಕೆಲವು ಸಮಯದ ಹಿಂದೆ ನಾನು ಜಗತ್ತಿನ ಅತ್ಯಂತ ಶ್ರೀಮಂತ  ವ್ಯಕ್ತಿಗಳಲ್ಲಿ ಓರ್ವರಾದ ಸುಲೈಮಾನ್ ರಾಜಿಹೀಯವರ ಸಂದರ್ಶನವನ್ನು ಆಲಿಸಿದೆ. ನಾನು ಅವರ ಹಿಮಾಲಯಕ್ಕಿಂತ ಉನ್ನತವಾದ ಸಂಕಲ್ಪ ಅಥವಾ ಇರಾದೆಗಳಿಂದ ಮತ್ತು ಆಕರ್ಶಕವಾದ ವಿಚಾರ ಅಥವಾ ಚಿಂತನೆಗಳಿಂದ ಪ್ರಭಾವಿತನಾದೆ. ಅವರು ಅಗರ್ಭ ಶ್ರೀಮಂತರಾಗಿದ್ದರು, ಅಪಾರ ಸೊತ್ತಿಗೆ ಮಾಲಿಕನೂ ಆಗಿದ್ದರು. ಅವರು ಹಲವಾರು ಮಸೀದಿಗಳನ್ನೂ ನಿರ್ಮಿಸಿದ್ದು ಸಾವಿರಾರು ಅನಾಥ ಮತ್ತು ನಿರ್ಗತಿಕ ಮಕ್ಕಳಿಗೆ ಆಶ್ರಯದಾತರಾಗಿದ್ದರು.

ಇಂತಹಾ ಓರ್ವ ಮಹಾನ್ ಸಾದಕ ತನ್ನ 50 ವರ್ಷಗಳ ಹಿಂದಿನ ಜೀವನದ ಸಂಗತಿಗಳನ್ನು ವಿವರಿಸುತ್ತಾ ಹೇಳಿದರು, "ಅಂದು ನನ್ನಲ್ಲಿ ಎರಡೆರಡು ಕೈ ಕಾಲುಗಳ ಹೊರತು ಇನ್ನೇನೂ ಇರಲಿಲ್ಲ. ಇದರಿಂದ ನಾನು ಶ್ರಮಪಟ್ಟು ದಿನಾ ಎರಡು ಸಮಯದ ಅನ್ನಾಹಾರವನ್ನು ಸಂಗ್ರಹಿಸುತ್ತಿದ್ದೆ. ಕೆಲವೊಮ್ಮೆ ಎರಡು ಸಮಯದ ಆಹಾರವೂ ಕೈಗೆಟಕುತ್ತಿರಲಿಲ್ಲ. ನಾನು ಜೀವನ ನಿರ್ವಹಣೆಗಾಗಿ ಜನರ ಮನೆಗಳನ್ನು ಒರೆಸುವ-ತೊಳೆಯುವ ಕೆಲಸಗಳನ್ನೂ ಮಾಡುತ್ತಿದ್ದೆ ಮತ್ತು ಕೆಲವೊಮ್ಮೆ ಪೂರ್ತಿ ದಿನ ಯಾವುದಾದರೂ ಅಂಗಡಿ ಅಥವಾ ಬ್ಯಾಂಕ್‌ಗಳಲ್ಲಿ ಕೂಲಿ ಕೆಲಸ ಮಾಡುತ್ತಿದ್ದೆ."

ಅವರು ತನ್ನ ಜೀವನದ ಹಾದಿಯಲ್ಲಿ ದಾಟಿ ಬಂದ ಎಡರು ತೊಡರುಗಳನ್ನು, ಏಳು-ಬೀಳುಗಳನ್ನು ವಿವರಿಸುತ್ತಾ ವಿಜಯದ ಅಂತಸ್ತನ್ನು ಏರಬೇಕೆಂದರೆ ಸೋಲಿನ ಸಾಲುಗಳನ್ನು ಮೆಟ್ಟಿಲುಗಳನ್ನಾಗಿ ಮಾರ್ಪಡಿಸಿಕೊಳ್ಳುವ ಛಲಬೇಕೆಂದು ಹೇಳಿದರು.

ನಾನು ಸುಲೈಮಾನ್ ರಾಜಿಹೀಯವರ ಜೀವನ ವೃತ್ತಾಂತವನ್ನು ಅಧ್ಯಯನ ನಡೆಸಿದಾಗ ನಮ್ಮ ಪೈಕಿ ಹಲವರಲ್ಲಿ ಅಲ್ಲಾಹನ ಅನುಗ್ರಹದಿಂದ ಸುಲೈಮಾನ್‌ರವರಂತಹಾಇಚ್ಛಾಶಕ್ತಿ, ಅಪರ್ಣಾ ಮನೋಭಾವವಿರುವುದಾಗಿಯೂ ಅವರಂತೆ ಸಾಧನೆಗಳನ್ನು ದಾಖಲಿಸಬಲ್ಲರೆಂದೂ ತೋರಿತು. ಆದರೆ, ಇದು ಅವರು ಕೆಲವು ಪ್ರತ್ಯೇಕ ಕೌಶಲ್ಯತೆಗಳನ್ನು ಕಲಿತುಕೊಂಡಾಗ ಮತ್ತು ಆ ಕುರಿತು

ಸಂಪೂರ್ಣವಾಗಿ ಗಮನವನ್ನು ಕೇಂದ್ರೀಕರಿಸಿದಾಗ ಮಾತ್ರ ಸಾಧ್ಯ. ಅದೇ ಪ್ರಕಾರ ಆ ನಿಟ್ಟಿನಲ್ಲಿ ಶ್ರಮವಹಿಸಬೇಕು ಮತ್ತು ಅದು ಕೂಡಾ ತನ್ನ ಅರಿವಿಗೆ ಅನುಸಾರವಾಗಿರಬೇಕು. ಕೆಲವು ಜನರಲ್ಲಿ ಅಪಾರ ಪ್ರತಿಭೆಯೂ, ಗ್ರಾಹ್ಯಶಕ್ತಿಯೂ ಇರುತ್ತದೆ. ಆದರೆ ಆ ಕುರಿತು ಅವರಿಗೇ ಅದರ ಪರಿವೆ ಇರುವುದಿಲ್ಲ ಅಥವಾ ಅವುಗಳನ್ನು ಬೆಳಕಿಗೆ ತರುವ ನಿಟ್ಟಿನಲ್ಲಿ ಯಾರೂ ಅವರಿಗೆ ಸಹಕಾರವನ್ನು ನೀಡುವುದಿಲ್ಲ. ಕೆಲವರು ಉತ್ತಮ ಭಾಷಣ ನೀಡಬಲ್ಲರು, ಕೆಲವರಲ್ಲಿ ವ್ಯಾಪಾರಕ್ಕೆ ಸರಿಹೊಂದುವ ವಿಶಿಷ್ಟ ಗುಣವಿರುತ್ತದೆ. ಕೆಲವರು ಬುದ್ಧಿವಂತರೂ ಕುಶಾಗ್ರಮತಿಗಳೂ ಆಗಿರುತ್ತಾರೆ, ಇನ್ನು ಕೆಲವರು ದೂರದೃಷ್ಟಿ ಇರುವವರೂ ಅರ್ಪಣಾ ಮನೋಭಾವದಿಂದ ದುಡಿಯುವವರೂ ಆಗಿರುತ್ತಾರೆ. ಇಲ್ಲಿ ಸಮಸ್ಯೆ ಇರುವುದು ಪ್ರತಿಭೆಗೆ ತಕ್ಕ ಪುರಸ್ಕಾರ ಲಭಿಸುವುದಿಲ್ಲವೆನ್ನುವುದೊಂದಾದರೆ ಸ್ವಯಂ ತಮ್ಮಲ್ಲಿ ಹುದುಗಿರುವ ಪ್ರತಿಭೆಯ ಕುರಿತು ಅವರಿಗೇ ಜ್ಞಾನವಿರುವುದಿಲ್ಲವೆನ್ನುವುದು ಮತ್ತೊಂದಾಗಿದೆ. ಕೆಲವು ಸೌಭಾಗ್ಯವಂತರಷ್ಟೇ ತಮ್ಮಲ್ಲಿ ಅಂತರ್ಗತವಾಗಿರುವ ಪ್ರತಿಭೆಯನ್ನು ಮನಗಾಣುತ್ತಾರೆ, ಅದನ್ನು ತರಬೇತಿಯಿಂದ ಪಕ್ವಗೊಳಿಸುತ್ತಾರೆ, ಸಂಪನ್ಮೂಲ ವ್ಯಕ್ತಿಗಳ ಮಾರ್ಗದರ್ಶನ ಪಡೆದು ಅದನ್ನು ಬೆಳಗುವಂತೆ ಮಾಡುತ್ತಾರೆ. ಈ ಮೂಲಕ ಯಾವುದಾದರೂ ಉದಾರಿಗಳನ್ನು ಆಕರ್ಷಿಸಿಕೊಂಡು ಅವರ ಸಹಾಯ-ಸಹಕಾರಗಳ ಮೂಲಕ ತನ್ನ ಗುರಿ ಸಾಧಿಸಿಕೊಳ್ಳುತ್ತಾರೆ. ಇಂತಹಾ ಚುರುಕು-ಚಾಲಾಕಿತನ ಬಹಳ ವಿರಳ ಅಪರೂಪಕ್ಕೊಂದು ಉದಾಹರಣೆಗಳನ್ನು ಕಾಣಬಹುದಷ್ಟೆ. ಸಾಮಾನ್ಯವಾಗಿ ಪ್ರತಿಭಾವಂತರ ಪ್ರತಿಭೆಗಳು ಅವರ ಹೃದಯಾಂತರಾಳದಲ್ಲೇ ಮುರುಟಿ ಬಿಡುತ್ತದೆ. ಅವುಗಳನ್ನು ನೆಟ್ಟು ಹದಗೊಳಿಸಿ ಬೆಳೆಸುವಂತಹಾ ಅವಕಾಶಗಳು ಲಭಿಸುವುದಿಲ್ಲ. ಕೊನೆಗೆ ಅಜ್ಜ ನೆಟ್ಟ ಆಲದ ಮರಕ್ಕೆ ನೇತು ಬೀಳುವಂತೆ ಸಂಪ್ರದಾಯಕ್ಕೆ ಶರಣಾಗಿಮಹತ್ವಾಕಾಂಕ್ಷೆಗಳ ಕತ್ತು ಹಿಸುಕುವ ಅನಿವಾರ್ಯತೆಗೆ ಬಲಿಯಾಗಬೇಕಾಗುತ್ತದೆ. ಇದರಿಂದ ಸಮಾಜವು ಒಂದು ಉನ್ನತ ಮೇಧಾವಿಯನ್ನೋ, ಪ್ರಗಲ್ಭ ವಾಗ್ಮಿಯನ್ನೋ, ಮಹಾನ್ ವಿದ್ವಾಂಸರನ್ನೋ ಕಳೆದುಕೊಳ್ಳುತ್ತದೆ ಅಥವಾ ಓರ್ವ ಆದರ್ಶ ನಾಗರಿಕ, ಮಾದರೀ ಪುರುಷ, ಯಶಸ್ವೀ ವರ್ತಕ, ಪತಿ ಅಥವಾ ಪಿತನು ನಷ್ಟ ಹೊಂದುತ್ತಾನೆ.

ಈ ಲೇಖನದಲ್ಲಿ ನಾವು ಕೆಲವೊಂದು ಪ್ರತಿಭೆಗಳು ಮತ್ತು ವ್ಯಕ್ತಿತ್ವಗಳನ್ನು ಉಲ್ಲೇಖಿಸುತ್ತೇವೆ. ಕೆಲವೊಮ್ಮೆ ಅಂತಹಾ ಹೊಂಬೆಳಕಿನ ಕಿಡಿಗಳು ತಮ್ಮ ಅಂತರಾಳದಲ್ಲಿ ಹುದುಗಿದ್ದರೆ ಅದನ್ನು ಜ್ವಾಜಲ್ಯಮಾನವಾಗಿ ಬೆಳಗುವಂತೆ ಮಾಡಲು ಇದರಿಂದ ಪ್ರೇರಣೆ ದೊರಕಬಹುದು. ನೀವು ಜನ ಮಾನಸವನ್ನು ಬೆಳಗುವ ಪ್ರತೀಕಗಳಾಗಬೇಕೆನ್ನುವುದೇ ನಮ್ಮ ಆಶಯವಾಗಿದೆ.

ಆದ್ದರಿಂದ ಬನ್ನಿ! ನಮ್ಮ ಹೆಜ್ಜೆಯೊಂದಿಗೆ ಹೆಜ್ಜೆ ಇಡಿರಿ

ಸಾರಾಂಶ : **"ನೀವು ಪರ್ವತಾರೋಹನಕ್ಕೆ ತೊಡಗಿದರೆ ಸಣ್ಣ-ಸಣ್ಣ ಕಲ್ಲುಗಳ ಮೇಲೆ ಕಾಲಿಡುವಾಗ ಹೆಚ್ಚು ಎಚ್ಚರವಹಿಸಿರಿ. ಅಲ್ಲಲ್ಲಿ ಹರಡಿಕೊಂಡಿರುವ ದೊಡ್ಡ ಬಂಡೆಗಳ ಕುರಿತು ಗಮನ ಹರಿಸದಿರಿ.**

**ಎಚ್ಚರದಿಂದ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತಾ ಸಾಗಿರಿ. ಜಿಗಿದುಕೊಂಡು ಹೋಗಲು ಪ್ರಯತ್ನಿಸದಿರಿ. ಹೀಗೆ ಮಾಡಿದರೆ ನಿಮ್ಮ ಕಾಲು ಜಾರಬಹುದಾಗಿದೆ."**

# ನಿಮ್ಮನ್ನು ನೀವು ಸುಧಾರಿಸಿಕೊಳ್ಳಿರಿ

ನೀವು ಇಪ್ಪತ್ತು ವರ್ಷದ ಒಬ್ಬ ಯುವಕನೊಂದಿಗೆ ಯಾವುದಾದರೂ ವಿಷಯದ ಕುರಿತು ಮಾತಾಡುತ್ತೀರಿ. ಅವನ ಮಾತಾಡುವ ಶೈಲಿ, ಅವನ ಅಬಿರುಚಿ ಮತ್ತು ಆಲೋಚನೆಗಳು ನಿಮಗೆ ಮೆಚ್ಚಿಗೆಯಾಗುತ್ತದೆ. ಕೆಲವು ವರ್ಷಗಳ ಬಳಿಕ ಎರಡನೇ ಬಾರಿ ನೀವು ಅವನನ್ನು ಸಂಧಿಸುತ್ತೀರಿ. ಮಾತುಕತೆ ನಡೆಸುತ್ತೀರಿ. ಈಗ ಅವನಿಗೆ 30ವರ್ಷ ವಯಸ್ಸಾಗಿರುತ್ತದೆ. ಆದರೆ ಅವನ ಜ್ಞಾನ ಮತ್ತು ವ್ಯಕ್ತಿತ್ವದಲ್ಲೇನೂ ಬದಲಾವಣೆಯನ್ನು ತಾವು ಕಾಣುವುದಿಲ್ಲ. ಹತ್ತು ವರ್ಷದ ಸುದೀರ್ಘ ಅವಧಿಯಲ್ಲಿ ಅವನ ವ್ಯಕ್ತಿತ್ವದಲ್ಲೋ-ಅರಿವಿನಲ್ಲೋ ಯಾವುದೇ ರೀತಿಯ ವಿಕಸನ-ಹೆಚ್ಚಳ ಕಂಡು ಬರುವುದಿಲ್ಲ. ಅದೇ ನೀವು ಇತರ ಕೆಲವು ಜನರೊಂದಿಗೆ ಬೆರೆತಾಗ ಅವರು ಜೀವನದಿಂದ ಲಾಭ ಪಡೆಯುತ್ತಿರುವುದು ಸ್ಪಷ್ಟವಾಗಿ ನಿಮಗೆ ಗೋಚರಿಸುತ್ತದೆ. ಅವರ ರೀತಿ-ನೀತಿಗಳು, ಮಾತಿನ ಶೈಲಿ ಮತ್ತು ಆಶಯ ಅಭಿಲಾಶೆಗಳಲ್ಲಿ ಸಾಕಷ್ಟು ಬದಲಾವಣೆಗಳನ್ನು ನೀವು ಧರ್ಶಿಸುತ್ತೀರಿ. ಅವರು ನಿರಂತರ ಸ್ವಯಂ ಸುಧಾರಣೆಯಲ್ಲಿ ನಿರತರಾಗಿರುತ್ತಾರೆ. ಜೀವನದ ಪ್ರತಿ ಕ್ಷಣವನ್ನು ಅವರು ಸ್ವಯಂ ಸಂಸ್ಕರಣೆ ಮತ್ತು ಸುಧಾರಣೆ ಕಾರ್ಯದಲ್ಲಿ ವ್ಯಯಿಸುತ್ತಾರೆ ಅಥವಾ ಅದಕ್ಕಾಗಿ ಹಾತೊರೆಯುತ್ತಾರೆ.

ಒಂದೊಮ್ಮೆ ಈ ಕುರಿತಾಗಿ ನೀವು ಜನರ ವ್ಯತಿರಿಕ್ತವಾದ ಮನೋಭಾವವನ್ನು ಅರಿತುಕೊಳ್ಳಬೇಕೆಂದರೆ, ಬನ್ನಿ, ನಾವು ಅವರ ಸ್ಥಿತಿ-ಗತಿಗಳ ಕುರಿತು ಕೂಲಂಕುಶವಾಗಿ ಪರಿಶೀಲಿಸೋಣ.

ಪ್ರಪ್ರಥಮವಾಗಿ ನಾವು ಟಿ.ವಿ. ಚಾನೆಲ್‌ಗಳ ವೀಕ್ಷಕನ ಕುರಿತು ನೋಡೋಣ. ಕೆಲವರು ಟಿ.ವಿ.ಯ ಮೇಲೆ ಯಾವ ರೀತಿ ದೃಷ್ಟಿ ನೆಟ್ಟಿರುತ್ತಾರೆಂದರೆ ಅದು ಅವರ ಸಾಮಾನ್ಯ ಜ್ಞಾನದಲ್ಲಿ ಹೆಚ್ಚಳ ಮತ್ತು ಬುದ್ಧಿಗೆ ಹೊಳಪು ದೊರಕಿಸಿಕೊಡಲು ಸಹಕಾರಿಯಾಗುತ್ತದೆ. ಇಂತಹಾ ಜನರು ಜೀವನದಲ್ಲಿ ಎದುರಾಗುವ ಸಮಸ್ಯೆಗಳನ್ನು ಸವಾಲಾಗಿ ಸ್ವೀಕರಿಸಿಕೊಂಡು ಎದುರಿಸುವುದನ್ನು ಇಷ್ಟಪಡುತ್ತಾರೆ.

ಈ ಸವಾಲುಗಳ ಮೂಲಕ ಅವರು ಕೇವಲ ಮಾತುಗಾರಿಕೆ ಅಥವಾ ವಾಕ್ಚತುರ್ಯವನ್ನಷ್ಟೇ ಪಡೆದುಕೊಳ್ಳುವುದಲ್ಲ, ಬದಲಾಗಿ ಯಾವುದೇ ಸಂಕೀರ್ಣ ಪರಿಸ್ಥಿತಿಗಳಲ್ಲೂ ಎದುರಾಗುವ ಸೂಕ್ಷ್ಮ ಪ್ರಶ್ನೆಗಳಿಗೂ ಉತ್ತರಿಸುವ ಮತ್ತು ತನ್ನ ಮಾತುಗಳನ್ನು ಆಲಿಸುವವರ ಮೇಲೆ ತನ್ನ ಚಿಂತನೆ ಮತ್ತು ಆಶಯಗಳ ಗಂಭೀರ ಪರಿಣಾಮ ಬೀರುವಂತೆ ಮಾಡುವ ವಿಶಿಷ್ಟ ಶೈಲಿಯನ್ನು ಅವರು ಕರಗತ ಮಾಡಿಕೊಂಡಿರುತ್ತಾರೆ.

ಟಿ.ವಿ.ಯ ವೀಕ್ಷಕರಲ್ಲಿ ಇನ್ನೊಂದು ವರ್ಗದರು ಭಾವಾವೇಶಪೂರ್ಣವಾದ ನಾಟಕ, ಪ್ರೀತಿ-ಪ್ರೇಮಕ್ಕೆ ಸಂಬಂಧಿಸಿದ ಕತೆ ಇರುವ ಸೀರಿಯಲ್, ಭೀತಿಕಾರಕ-ಪತ್ತೇದಾರಿ-ಮಸಾಲೆಭರಿತ ಚಿತ್ರಗಳನ್ನು(ಸಿನಿಮಾ) ಅವರು ನೋಡದೆ ಬಿಡುವುದೇ ಇಲ್ಲ.

ಇನ್ನೀಗ ಬನ್ನಿ, ನಾವು ಮೇಲೆ ವಿವರಿಸಿದ ಎರಡು ರೀತಿಯ ಜನರ ಕುರಿತು ಐದು ಅಥವಾ ಹತ್ತು ವರ್ಷಗಳ ನಂತರ ಅಧ್ಯಯನ ಮಾಡಿಕೊಂಡು ಅವರಲ್ಲಿ ಯಾರು ತಮ್ಮ ಬುದ್ಧಿ, ಅರಿವು

ಮತ್ತು ವ್ಯಕ್ತಿತ್ವದಲ್ಲಿ ಉನ್ನತಿ ಸಾಧಿಸಿದ್ದಾರೆಂದೂ ಜನರೊಂದಿಗೆ ಸಂಪರ್ಕ ಸಾಧಿಸುವ ಮತ್ತು ಜನರ ಗಮನ ಸೆಳೆವ ನಿಟ್ಟಿನಲ್ಲಿ ಯಾರು ಹೆಚ್ಚು ಯಶಸ್ಸು ಸಂಪಾದಿಸಿದ್ದಾರೆಂದೂ ಅದೇ ಪ್ರಕಾರ ಇದರಿಂದ ಅವರ ವ್ಯಕ್ತಿತ್ವದಲ್ಲಿ ಎಷ್ಟು ವಿಕಸನ ಉಂಟಾಗಿದೆ ಎಂದು ಪರಿಶೋಧಿಸೋಣ.

ಪರಿಶೋಧನೆಯಿಂದ ಕಂಡುಕೊಂಡ ಪಲಿತಾಂಶವನ್ನು ಆಧಾರವಾಗಿಟ್ಟುಕೊಂಡು ಪ್ರಥಮ ವರ್ಗದವರೇ ಇದರಲ್ಲಿ ಅಗಾಧ ಪ್ರಮಾಣದಲ್ಲಿ ಪ್ರಯೋಜನವನ್ನು ಪಡೆದಿದ್ದಾರೆಂದು ನಿಸ್ಸಂಶಯವಾಗಿ ಘೋಷಿಸಬಹುದಾಗಿದೆ. ಇವರ ನಡೆ-ನುಡಿ, ವ್ಯಾಪಾರ-ವ್ಯವಹಾರ, ಮಾತು ಮತ್ತು ಪ್ರವರ್ತನೆಗಳಲ್ಲಿ ಹಿಂದಿಗಿಂತ ಗಣನೀಯ ಮಟ್ಟದಲ್ಲಿ ಸುಧಾರಣೆಯನ್ನು ಕಾಣುತ್ತೀರಿ. ಅವರು ನಿಮ್ಮೊಂದಿಗೆ ತಮ್ಮ ದೃಷ್ಟಿಕೋನದಲ್ಲಿ ಧಾರ್ಮಿಕ ನಿಯಮಗಳು, ಗಣಿತ-ವಿಜ್ಞಾನ ಮತ್ತು ಸಮಾಜಶಾಸ್ತ್ರಕ್ಕೆ ಸಂಬಂಧಿಸಿ ಮಾತ್ರವಲ್ಲದೆ, ಪ್ರಸ್ತುತ ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಗತಿಗಳ ಕುರಿತು ವಿವರಿಸುವುದನ್ನೂ ನೀವು ಕಾಣುವಿರಿ. ಅದೇ ಇನ್ನೊಂದು ವರ್ಗದವರು ಮಾತಾಡುವಾಗಲೆಲ್ಲಾ ಚಿತ್ರ ನಟರ, ನಾಟಕಕಾರರ ಮಾತುಗಳನ್ನು ಅನುಕರಿಸುತ್ತಲೂ ಆದರಿಸುತ್ತಲೂ ಇರುತ್ತಾರೆ. ಅವರು ನಿಮಗೆ ನಾಟಕ ಮತ್ತು ಸಿನಿಮಾಗಳ ವಿಚಾರಗಳನ್ನು ತಿಳಿಸುತ್ತಾರೆ. ಈ ವರ್ಗದಲ್ಲಿ ಒಳಪಡುವ ವ್ಯಕ್ತಿಯೊಬ್ಬರು ಒಂದು ಸಭೆಯಲ್ಲಿ ಮಾತನಾಡುತ್ತಾ ಹೇಳಿದರು, “ಅಲ್ಲಾಹು ಸುಬ್‌ಹಾನಹುವತಆಲಾ ಹೇಳುತ್ತಾನೆ, ಹೇ ನನ್ನ ದಾಸನೇ ಪರಿಶ್ರಮಿಸು, ನಾನೂ ನಿನ್ನ ಜೊತೆಯಾಗಿ ಪರಿಶ್ರಮಿಸುವೆನು'' ನಾವು ಆ ವ್ಯಕ್ತಿಗೆ ಇದು ಕುರ್‌ಆನಿನ ವಚನವಲ್ಲವೆಂದು ತಿಳಿಹೇಳಿದೆವು. ಅದನ್ನು ಕೇಳಿ ಅವರ ಮುಖ ಚಹರೆ ಬದಲಾಯಿತು. ಆದರೆ ಮೌನ ವಹಿಸುವುದೆ ಲೇಸೆಂದುಕೊಂಡು ಸುಮ್ಮನಾದರು. ಬಳಿಕ ನಾನು ಅವರಾಡಿದ ಮಾತಿನ ಕುರಿತು ಅವಲೋಕನ ಮಾಡಿದಾಗ ಅದು ದೂರದರ್ಶನದ ದಾರವಾಹಿ ನೋಡುವ ಸಂದರ್ಭದಲ್ಲಿ ಅವರನ್ನು ಅಂಟಿಕೊಂಡಿರಬೇಕೆಂದು ವ್ಯಕ್ತವಾಯಿತು. ಅದನ್ನೇ ಆ ವ್ಯಕ್ತಿ ಅಲ್ಲಾಹನ ಹೆಸರಿನಲ್ಲಿ ಉಗುಳಿ ಬಿಟ್ಟಿದ್ದರು.

ಈಗ ಒಂದಿನಿತು ಇತ್ತ ಗಮನಿಸಿರಿ.

ದಿನಪತ್ರಿಕೆಗಳನ್ನೂ, ವಾರಪತ್ರಿಕೆ, ಪಾಕ್ಷಿಕ-ಮಾಸಿಕಗಳನ್ನು ಓದುವ ಅದೆಷ್ಟೊ ಜನರಿದ್ದಾರೆ. ಅವರು ಇವುಗಳಿಂದ ಅದೆಷ್ಟೋ ರೀತಿಯ ಪ್ರಯೋಜನಗಳನ್ನು ಪಡೆದುಕೊಳ್ಳುತ್ತಾರೆ. ಅವರು ಇವುಗಳಿಂದ ವಿಷಯಗಳನ್ನೂ, ಮಾಹಿತಿಗಳನ್ನೂ ಸಂಗ್ರಹಿಸಿಕೊಂಡು ಆ ಮೂಲಕ ತಮ್ಮ ಜ್ಞಾನ ಭಂಡಾರವನ್ನು ಅಭಿವೃದ್ದಿಪಡಿಸಿಕೊಳ್ಳುತ್ತಾರೆ. ಅದು ಅವರಿಗೆ ವ್ಯವಹಾರಿಕ ಜೀವನದಲ್ಲೂ ಕೌಟುಂಬಿಕ ಜೀವನದಲ್ಲೂ, ಸಾಮಾಜಿಕ ಜೀವನದಲ್ಲೂ ಮಾತ್ರವಲ್ಲದೆ ಉಪ ಜೀವನ ಮಾರ್ಗದಲ್ಲೂ ಉನ್ನತಿಯನ್ನೂ ಶ್ರೇಯಸ್ಸನ್ನೂ ಕಲ್ಪಿಸಿಕೊಡುತ್ತದೆ. ಇನ್ನು ಕೇವಲ ಕ್ರೀಡೆ ಮತ್ತು ಚಲನಚಿತ್ರಗಳ ಪುಟಗಳನ್ನಷ್ಟೇ ತೆರೆದು ನೋಡುವ ಅದೆಷ್ಟೋ ಜನರಿದ್ದಾರೆ. ಪರಿಸ್ಥಿತಿ ಹೇಗಿದೆ ಎಂದರೆ, ಕ್ರೀಡೆ ಸೌಂದರ್ಯ ಮತ್ತು ಸಿನಿಮಾಗಳಿಗೆ ಸಂಬಂಧಿಸಿದ ಪತ್ರಿಕೆಗಳು ಆಕರ್ಶಕ ವರ್ಣ ಪುಟಗಳನ್ನು ಪ್ರಕಟಿಸುವುದರಲ್ಲಿ, ವಿವಿಧ ಭಂಗಿಗಳಲ್ಲಿ ಅರೆನಗ್ನ ದೇಹವನ್ನು ಪ್ರಕಟಿಸುತ್ತಾ ಪುಟಗಳನ್ನು ಏರಿಸುವುದರಲ್ಲಿ ಪರಸ್ಪರ ಪೈಪೋಟಿ ನಡೆಸುತ್ತಿದೆ. ನಮ್ಮ ಮನೆ ಮತ್ತು ಪರಿಸರದ ಅವಸ್ಥೆಯೂ ಇದಕ್ಕಿಂತ ಭಿನ್ನವಾಗಿಲ್ಲ. ನೀವು ನಿಮ್ಮ ಚಾರಿತ್ರ್ಯವನ್ನು ಉಳಿಸಿಕೊಂಡು ಯಶಸ್ವಿಯ ಔನ್ನತ್ಯವನ್ನು ತಲುಪಬಯಸುವುದಾದರೆ, ವಾತಾವರಣದ ಕೊಳಕು ನಿಮ್ಮನ್ನು ಅಂಟಿಕೊಳ್ಳದಂತೆ

ಎಚ್ಚರಿಕೆ ವಹಿಸುತ್ತಾ ಜ್ಞಾನ ಅಥವಾ ಅರಿವು ಎಲ್ಲಿದ್ದರೂ-ಹೇಗಿದ್ದರೂ ಅದನ್ನು ಸ್ವೀಕರಿಸಿಕೊಳ್ಳುತ್ತಾ ಮುಂದೆ ಸಾಗಬೇಕಾಗಿದೆ.

ಅಬ್ದುಲ್ಲಾ ಓರ್ವ ಪುಕ್ಕ ಮನುಷ್ಯನಾಗಿದ್ದ. ಅದಕ್ಕೆ ಕಾರಣ ಅವನಲ್ಲಿ ಸಾಕಷ್ಟು ವಿದ್ಯೆ ಇರಲಿಲ್ಲ. ಒಂದು ದಿನ ಅವನು ಳುಹರ್ ನಮಾಝ್‌ಗಾಗಿ ಮನೆಯಿಂದ ಮಸೀದಿಗೆ ಹೊರಟ. ರಸ್ತೆಯಲ್ಲಿ ಒಬ್ಬ ವ್ಯಕ್ತಿ ಖರ್ಜೂರದ ಮರದಲ್ಲಿ ಹತ್ತಿರುವುದನ್ನು ಕಂಡ. ಆ ವ್ಯಕ್ತಿ ಮರದಿಂದ ಅಪ್ರಯೋಜಕ ವಸ್ತುಗಳನ್ನು ನಿವಾರಿಸುತ್ತಿದ್ದನು. ಇದನ್ನು ಕಂಡು ಅಬ್ದುಲ್ಲಾ 'ಈ ವ್ಯಕ್ತಿಗೆ ನಮಾಝಿನ ಪರಿವೆ ಇಲ್ಲ. ಏನು ಇವನಿಗೆ ಅದಾನ್‌ನ ಧ್ವನಿ ಕೇಳಿಸಲಿಲ್ಲವೇ? ನಮಾಝಿನ ಕುರಿತು ಇಷ್ಟೊಂದು ನಿರ್ಲಕ್ಷ್ಯೆಯೇ?' ಎಂದು ಗುನುಗುಟ್ಟುತ್ತಾ ಕೋಪದಿಂದ ಜೋರಾಗಿ "ಕೆಳಗಿಳಿದು ನಮಾಝ್ ಮಾಡೊಲೇ...." ಎಂದು ಕೂಗಿದನು. ಆ ವ್ಯಕ್ತಿಯು ನಿಧಾನವಾಗಿ ಅಲ್ಲಿಂದಲೇ "ಸರಿ, .... ಸರಿ" ಎಂದು ಉತ್ತರಿಸಿದನು. ಈಗ ಅಬ್ದುಲ್ಲಾ ಇನ್ನಷ್ಟು ಜೋರಾಗಿ ಕೂಗಿ ಹೇಳಿದ ``ಕೆಳಗಿಳಿಯೋ ಕತ್ತೆ! ಬೇಗ ಇಳಿದು ನಮಾಝ್ ಮಾಡು" ಅದನ್ನು ಆಲಿಸಿದ ಆ ವ್ಯಕ್ತಿ ಕುಪಿತನಾಗಿ ಕೇಳಿದ "ಏನೆಂದೆ...? ಕತ್ತೆ ಅಂದ್ಯಾ ನನ್ನನ್ನು?" ಎನ್ನುತ್ತಲೇ ಕೈಯಲ್ಲಿ ಒಂದು ಮರದ ಗೆಲ್ಲನ್ನು ಹಿಡಿದುಕೊಂಡು ಕೆಳಗಿಳಿಯಲಾರಂಭಿಸಿದ. ಇನ್ನೀಗ ಈ ವ್ಯಕ್ತಿ ನನ್ನ ತಲೆ ಒಡೆದು ಹಾಕುತ್ತಾನೆಂದುಕೊಂಡ ಅಬ್ದುಲ್ಲಾ ಅಲ್ಲಿಂದ ಕಾಲ್ಕಿತ್ತು ಮಸೀದಿ ಸೇರಿಕೊಂಡ.

ಆ ವ್ಯಕ್ತಿಗೆ ತನ್ನನ್ನು 'ಕತ್ತೆ' ಎಂದು ಕರೆದಿದ್ದು ಯಾರೆಂದು ಗುರುತು ಸಿಕ್ಕಿರಲಿಲ್ಲ ಏಕೆಂದರೆ ಪುಕ್ಕ ಅಬ್ದುಲ್ಲ ತನ್ನ ಮುಖವನ್ನು ಮೊದಲೇ ತನ್ನ ಮುಂಡಾಸಿನಿಂದ ಮುಚ್ಚಿಕೊಂಡಿದ್ದ. ವ್ಯಕ್ತಿ ಕೆಳಗಿಳಿದು ಬಂದಾಗ ಅಬ್ದುಲ್ಲ ಮಾಯವಾಗಿದ್ದರಿಂದ ನೇರವಾಗಿ ಮನೆಗೆ ತೆರಳಿ ಅಲ್ಲೇ ನಮಾಝ್ ನಿರ್ವಹಿಸಿ ಸ್ವಲ್ಪ ಸಮಯ ವಿಶ್ರಾಂತಿ ಪಡೆದು ಮತ್ತೆ ತನ್ನ ಕೆಲಸಕ್ಕೆ ಮರಳಿದ.

ಅಸರ್‌ನ ನಮಾಝ್‌ಗಾಗಿ ಅಬ್ದುಲ್ಲ ಅದೇ ದಾರಿಯಿಂದ ಸಾಗುತ್ತಿದ್ದಾಗ ಮತ್ತೆ ಖರ್ಜೂರದ ಮರದಲ್ಲಿ ಅದೇ ವ್ಯಕ್ತಿ ಇರುವುದನ್ನು ಕಂಡ. ಈ ಬಾರಿ ಅಬ್ದುಲ್ಲಾ ತನ್ನ ಶೈಲಿಯಲ್ಲಿ ಬದಲಾವಣೆ ಮಾಡಿಕೊಂಡು ಕರೆದು ಕೇಳಿದ.

"ಅಸ್ಸಲಾಮು ಅಲೈಕುಮ್, ಚೆನ್ನಾಗಿದ್ದೀರಿ ತಾನೇ?"

ಆ ವ್ಯಕ್ತಿ ಹೇಳಿದರು "ಅಲ್ ಹಮ್ಮುಲಿಲ್ಲಾಹ್... ಚೆನ್ನಾಗಿದ್ದೇನೆ"

ಅಬ್ದುಲ್ಲ ಕೇಳಿದ "ಅಲ್ಲಾಹ್ ನಿಮ್ಮನ್ನು ಚೆನ್ನಾಗಿಡಲಿ. ಈ ವರ್ಷ ಫಸಲು ಹೇಗಿದೆ?"

ವ್ಯಕ್ತಿ ಹೇಳಿದ "ಅಲ್ಲಾಹ್‌ನಿಗೆ ಸ್ತುತಿ, ಚೆನ್ನಾಗಿದೆ"

ಅಬ್ದುಲ್ಲ ಹೇಳಿದ : ಅಲ್ಲಾಹು ನಿಮಗೆ ಅನುಗ್ರಹಿಸಲಿ, ನಿಮ್ಮ ಉಪಜೀವನದಲ್ಲಿ ಸಮೃದ್ಧಿಯನ್ನು ನೀಡಲಿ. ನೀವು ನಿಮ್ಮ ಮನೆಯವರಿಗಾಗಿ ಮಾಡುವ ಪರಿಶ್ರಮವನ್ನು ಸತ್ಕರ್ಮವಾಗಿ ಸ್ವೀಕರಿಸಲಿ"

ಈ ದುಃಆವನ್ನು ಆಲಿಸಿಕೊಂಡ ವ್ಯಕ್ತಿ ಅಬ್ದುಲ್ಲರಿಂದ ತುಂಬಾ ಸಂತೋಷಗೊಂಡನು. 'ಆಮೀನ್' ಹೇಳುತ್ತಾ ಅಬ್ದುಲ್ಲಾರಿಗೆ ಕೃತಜ್ಞತೆ ಹೇಳಿದನು. ಈಗ ಅಬ್ದುಲ್ಲಾ ಹೇಳಿದನು. "ಬಹುಷ ತಾವು ತುಂಬಾ ನಿಬಿಢರಾಗಿದ್ದೀರಿ. ಅದರಿಂದ ನಿಮಗೆ ಅಸರ್‌ನ ಅದಾನ್ ಕೇಳಿಸಿರಲಿಕ್ಕಿಲ್ಲ. ಅಸರ್‌ನ ಸಮಯವಾಗಿದೆ. ಜಮಾಅತ್ ಪ್ರಾರಂಭವಾಗಲು ಹೋಗುತ್ತಿದೆ. ತಾವು ಕೆಳಗಿಳಿದು ಶುದ್ಧಿಯಾದರೆ

ಜಮಾಅತ್‌ನೊಂದಿಗೆ ನಮಾಝ್ ನಿರ್ವಹಿಸಬಹುದು. ನಮಾಝಿನ ನಂತರ ಉಳಿದ ಕೆಲಸ ಪೂರ್ತಿಗೊಳಿಸಿದರಾಯಿತು. ಅಲ್ಲಾಹು ತಮಗೆ ಉತ್ತಮ ಆರೋಗ್ಯ ನೀಡಲಿ''

ವ್ಯಕ್ತಿ ಹೇಳಿದ “ತಾವು ಸರಿಯಾಗಿಯೇ ಹೇಳಿದಿರಿ. ಇನ್‌ಷಾ ಅಲ್ಲಾಹ್ ಇನ್‌ಷಾ ಅಲ್ಲಾಹ್” ವ್ಯಕ್ತಿ ಲಗುಬಗನೆ ಕೆಳಗಿಳಿದು ಬಂದ, ಅಬ್ದುಲ್ಲ ನನ್ನು ಸೇರಿಕೊಂಡು, ಆತ್ಮಿಯತೆಯಿಂದ ಕೈ ಕುಳುಕುತ್ತಾ ಹೇಳಿದ “ನಿಮ್ಮ ಸದ್ವರ್ತನೆಗಾಗಿ ನಾನು ನಿಮಗೆ ಕೃತಜ್ಞತೆ ಹೇಳುತ್ತೇನೆ. ಳುಹರ್‌ನ ಸಮಯದಲ್ಲಿ ಇಲ್ಲಿಂದ ಒಬ್ಬ ಹಾದು ಹೋಗುತ್ತಾ ತುಂಬಾ ಕೆಟ್ಟದಾಗಿ ನಡೆದುಕೊಂಡ. ಒಂದೊಮ್ಮೆ ಅವನು ನನ್ನ ಕೈಗೆ ಸಿಕ್ಕಿದ್ದರೆ `ಕತ್ತೆ' ಯಾರೆಂದು ಅವನಿಗೆ ತಿಳಿ ಹೇಳುತ್ತಿದ್ದೆ'' ಎಂದ.

ಸಾರಾಂಶ : **''ನಿಮ್ಮ ವರ್ತನೆಯನ್ನು ಅನುಸರಿಸಿ ಜನರೂ ನಿಮ್ಮೊಂದಿಗೆ ವರ್ತಿಸುತ್ತಾರೆ. ನೀವು ಒಳ್ಳೆಯವರಾದರೆ ನಾಡು ಒಳ್ಳೆಯದಾಗುತ್ತದೆ''**

# ಮನುಷ್ಯ ಪ್ರಕೃತಿಯನ್ನು ಬದಲಿಸುವುದು ಕಷ್ಟ...... ಅಸಾಧ್ಯವೇನೂ ಅಲ್ಲ!!!

ಮನುಷ್ಯರೆಲ್ಲರಿಗೂ ಒಂದೊಂದು ರೀತಿಯ ಅಭ್ಯಾಸ ಅಥವಾ ಹವ್ಯಾಸಗಳಿರುತ್ತದೆ. ಕೆಲವರಂತೂ ಆ ಕಾರಣದಿಂದಲೇ ಹೆಸರು ಗಳಿಸುತ್ತಾರೆ. ಅಭ್ಯಾಸದ ಹಿನ್ನಲೆಯಲ್ಲೇ ಪರಿಚಿತರಾದವರು ಹಲವರಿದ್ದಾರೆ. ಆ ಮೂಲಕ ಜನರ ಮನ-ಮಸ್ತಿಷ್ಕದಲ್ಲಿ ಸ್ಥಾನ ಪಡೆದುಕೊಳ್ಳುತ್ತಾರೆ. ಪ್ರತ್ಯೇಕ ಸಂದರ್ಭಗಳಲ್ಲಿ ವಿಶೇಷವಾಗಿ ಜ್ಞಾಪಕಕ್ಕೆ ಬರುವಂತಹ ಹಲವಾರು ಸುವಿಶೇಷ ವ್ಯಕ್ತಿತ್ವಗಳು ನಮ್ಮ-ನಿಮ್ಮ ನೆನಪಿನಲ್ಲಿ ಜೀವಂತವಾಗಿದೆ. ಇಂತಹ ಅಭ್ಯಾಸ ಅಥವಾ ಹವ್ಯಾಸಗಳನ್ನು ಬದಲಿಸುವುದು ಅಸಾಧ್ಯವೆನ್ನುವ ಅಭಿಪ್ರಾಯ ಜನರಲ್ಲಿ ರೂಢಮೂಲವಾಗಿದೆ. ಇಂತಹಾ ಜನರು ತಮ ಅಭ್ಯಾಸದ ಮುಂದೆ ಸೋಲೊಪ್ಪಿಕೊಂಡು ಬಿಡುತ್ತಾರೆ. ಹೇಗೆ ಜನ್ಮತಃ ಪಡೆದ ದೇಹದ ಗಾತ್ರವನ್ನೂ ವರ್ಣವನ್ನೂ ಬದಲಿಸಲಾಗದೋ ಅದೇ ಪ್ರಕಾರ ಬಾಲ್ಯದಿಂದಲೇ ಅಂಟಿಕೊಂಡು ಬಂದ ಅಭ್ಯಾಸ-ಹವ್ಯಾಸಗಳನ್ನು ಬದಲಿಸಲಾಗದೆಂದು ನಿರ್ಣಯಿಸಿ ಬಿಡುತ್ತಾರೆ. ಆ ಪ್ರಕಾರ ಅವರು ತಮ್ಮ ಅಭ್ಯಾಸ ಹವ್ಯಾಸವನ್ನು ತಮ್ಮ ದೌರ್ಬಲ್ಯವೆಂದು ಅಂಗೀಕರಿಸಿಕೊಳ್ಳುತ್ತಾರೆ. ಇದಕ್ಕೆ ಹೊರತಾಗಿ ಕೆಲವರು ಸ್ವಯಂ ಸವಾಲುಗಳನ್ನು ಸೃಷ್ಟಿಸಿಕೊಂಡು ಅದನ್ನು ಅತಿಜಯಿಸುವುದನ್ನು ಒಂದು ಹವ್ಯಾಸವಾಗಿಯೇ ಮಾಡಿಕೊಂಡಿರುತ್ತಾರೆ. ಅವರು ಆಪತ್ತು ಅಥವಾ ಸಮಸ್ಯೆಗಳನ್ನು ಪರಿಹರಿಸುವುದು ನಿತ್ಯಬಟ್ಟೆ ಬದಲಿಸಿದಂತೆ ಎಂದು ಭಾವಿಸುತ್ತಾರೆ!

ಕೆಚ್ಚಲಿನಿಂದ ಕರೆದ ಹಾಲನ್ನು ಯಾವುದೇ ಗಾತ್ರದ ಪಾತ್ರೆಯಲ್ಲಿ ತುಂಬಿಸಬಹುದಾದಂತೆ ನಾವು ನಮ್ಮ ಸ್ವಭಾವ ಮತ್ತು ವ್ಯಕ್ತಿತ್ವವನ್ನು ಉದ್ದೇಶಿತ ರೀತಿಯಲ್ಲಿ ರೂಪೀಕರಿಸಬಹುದಾಗಿದೆ. ವಾಸ್ತವದಲ್ಲಿ ಅದಕ್ಕೆ ಬೇಕಾಗಿರುವುದು ಸುದೃಢವಾದ ಇಚ್ಛಾಶಕ್ತಿಯಾಗಿದೆ. ನಾವು ಕೆಲವು ಪ್ರತ್ಯೇಕ ರೀತಿ ನೀತಿಗಳನ್ನು ಉಪಯೋಗಿಸಿಕೊಂಡರೆ ಕೇವಲ ಜನರ ಅಭ್ಯಾಸ-ಹವ್ಯಾಸಗಳನ್ನಷ್ಟೇ ಅಲ್ಲ ಬದಲಾಗಿ ಜನರ ಭಾವನೆ-ಬುದ್ಧಿ ಮತ್ತು ಜೀವನ ಕ್ರಮವನ್ನೇ ಬದಲಿಸಬಹುದಾಗಿದೆ.

ಇಬ್ನ್ ಹಝುಮ್ ತನ್ನ ಗ್ರಂಥ'ತೂಖಿಲ್ ಹಮಾಮ' ದಲ್ಲಿ ಉಂದುಲಿಸ್‌ನ ಓರ್ವ ಪ್ರಖ್ಯಾತ ವ್ಯಾಪಾರಿಯ ವೃತ್ತಾಂತವನ್ನು ಉಲ್ಲೇಖಿಸಿದ್ದಾರೆ. ಅವರ ಉಲ್ಲೇಖವು ಈ ರೀತಿ ಇದೆ.

ಉಂದುಲಿಸ್‌ನಲ್ಲಿ ಓರ್ವ ವ್ಯಾಪಾರಿ ತನ್ನ ಕಾರ್ಯಕ್ಷಮತೆ ಮತ್ತು ಸೂಕ್ಷ್ಮ ಬುದ್ಧಿಯಿಂದಾಗಿ ಪ್ರಖ್ಯಾತರಾಗಿದ್ದರು. ಒಮ್ಮೆ ಸಮೀಪದ ಇತರ ನಾಲ್ಕು ವ್ಯಾಪಾರಿಗಳೊಂದಿಗೆ ಅವರಿಗೆ ಸ್ಪರ್ಧೆ ಏರ್ಪಟ್ಟಿತು. ಆದರೆ ತನ್ನ ಬುದ್ಧಿ ಮತ್ತು ಚಾತುರ್ಯವನ್ನು ಬಳಸಿ ವ್ಯಾಪಾರಿಯು ಇತರರಿಂದ ಮೇಲುಗೈ ಸಾಧಿಸಿದರು. ಇದರಿಂದ ಅಸೂಯೆಗೊಂಡ ಇತರ ವ್ಯಾಪಾರಿಗಳು ಇವರನ್ನು ಹೇಗಾದರೂ ಮಾಡಿ ಸೋಲಿಸಬೇಕು. ಕಷ್ಟನಷ್ಟಕ್ಕೆ ಗುರಿಪಡಿಸಬೇಕೆಂದು ಪಣತೊಟ್ಟರು.

ಒಮ್ಮೆ ವ್ಯಾಪಾರಿಯು ಶುಭ್ರವಾದ ಬಿಳಿ ವಸ್ತ್ರವನ್ನು ಧರಿಸಿ ತಲೆಗೆ ಬೆಳ್ಳಗಿನ ಪೇಟ ತೊಟ್ಟು ಬೆಳಿಗ್ಗೆ ಮನೆಯಿಂದ ತನ್ನ ಅಂಗಡಿಯ ಕಡೆ ಹೊರಟರು. ಆ ನಾಲ್ಕು ವ್ಯಾಪಾರಿಗಳ ಪೈಕಿ ಓರ್ವನು ದಾರಿಯಲ್ಲಿ ಇವರನ್ನು ಸಂಧಿಸಿ ಬಹಳ ಹುರುಪು-ಉತ್ಸಾಹದಿಂದಲೇ ವ್ಯಾಪಾರಿಗೆ ಸಲಾಮ್

ಹೇಳಿದನು. ನಂತರ ಅವರ ಪೇಟದ ಕಡೆ ದೃಷ್ಟಿಸುತ್ತಾ "ನಿಮ್ಮ ಈ ಹಳದಿ ವರ್ಣದ ಪೇಟವು ಎಷ್ಟೊಂದು ಆಕರ್ಷಣೀಯವಾಗಿದೆ!" ಎಂದು ಹೇಳಿದನು.

ವ್ಯಾಪಾರಿ ಹೇಳಿದರು, "ನಿಮಗೆ ಕಾಣುವುದಿಲ್ಲವೇ? ಇದು ಬಿಳಿ ವರ್ಣದ ಪೇಟವಾಗಿದೆ."

ಅವನು ಹೇಳಿದನು, "ವರ್ಣವು ಹಳದಿಯೇ ಆಗಿದೆ, ಆದರೂ ಅತ್ಯಂತ ಸುಂದರವಾಗಿದೆ"

ವ್ಯಾಪಾರಿಯು ಮತ್ತೆ ಅವನೊಂದಿಗೆ ವಾದ ಬೆಳೆಸದೆ ಅವನನ್ನು ಅ ಲ್ಲೇ ಬಿಟ್ಟು ತನ್ನ ದಾರಿಯಲ್ಲಿ ಮುಂದುವರಿದರು. ಕೆಲವು ಹೆಜ್ಜೆ ಮುಂದೆ ಹೋಗುತ್ತಿರಲು ಆ ನಾಲ್ಕು ವ್ಯಾಪಾರಿಗಳಲ್ಲಿ ಮತ್ತೋರ್ವರು ಎದುರಾದರು. ಅವರೂ ಬಹಳ ಆತ್ಮೀಯತೆಯಿಂದ ಸಲಾಮ್ ಹೇಳಿದರು ಮತ್ತು ವ್ಯಾಪಾರಿಯ ಪೇಟದ ಕಡೆ ದೃಷ್ಟಿ ಬೀರುತ್ತಾ ಹೇಳಿದರು, "ಇಂದು ನೀವು ಅತ್ಯಂತ ಸುಂದರವಾಗಿ ಕಾಣುತ್ತಿದ್ದೀರಿ. ನಿಮ್ಮ ಉಡುಪು ಕೂಡಾ ಅತ್ಯಂತ ಸುಂದರವಾಗಿದೆ. ಇನ್ನು ನೀವು ತೊಟ್ಟಿರುವ ಹಸಿರು ಪೇಟವಂತೂ ಅವರ್ಣನೀಯವೂ, ಆಕರ್ಷಣೀಯವೂ ಆಗಿದೆ."

ವ್ಯಾಪಾರಿ ಹೇಳಿದರು, "ಸಹೋದರಾ!ಇದು ಶ್ವೇತ ವರ್ಣದ ಪೇಟವಾಗಿದೆ"

ಅವನು ಹೇಳಿದನು "ಅಲ್ಲ ಘನಮಾನ್ಯರೇ! ಅದು ಹಸಿರು ವರ್ಣದ್ದಾಗಿದೆ" "ಬಿಳಿ ಹೇಗೆ ಹಸಿರಾಗುವುದು! ನಡಿ ನನಗೆ ದಾರಿಬಿಡು" ಎಂದು ವ್ಯಾಪಾರಿ ಸುಸ್ತಾಗಿ ಹೇಳಿಬಿಟ್ಟರು. ನಂತರ ಅಲ್ಲಿಂದ ಮುಂದುವರಿಯುತ್ತಾ ಸಾಗಿದಂತೆ ಮನವು ಕದಡಿದ ಸರೋವರದ ನೀರಿನಂತೆ ಅಳುಕ ತೊಡಗಿತು. ಹಾಗೇ ತನ್ನಷ್ಟಕ್ಕೇ ತಾನೇ ಮಾತನಾಡುತ್ತಾ ಮುಂದೆ ಹೆಜ್ಜೆ ಹಾಕಿದರು. ಮತ್ತೆ-ಮತ್ತೆ ತನ್ನ ಮನಸ್ಸನ್ನು ಸಂತೃಪ್ತಿ ಪಡಿಸಲು ಪೇಟವು ಬಿಳಿಯಾಗಿಯೇ ಇದೆ ಎನ್ನುತ್ತಿದ್ದರು. ಹೇಗೂ ತನ್ನ ಅಂಗಡಿಯನ್ನು ತಲುಪಿದ ವ್ಯಾಪಾರಿ ಅಂಗಡಿಯ ಬೀಗ ತೆಗೆಯುತ್ತಿದ್ದಂತೆಯೇ ಆ ನಾಲ್ವರಲ್ಲಿ ಮೂರನೇಯವನು ಅಲ್ಲಿ ಪ್ರತ್ಯಕ್ಷನಾದನು ಮತ್ತು ಹೇಳಿದನು, "ವ್ಹಾಹ್! ಇಂದಿನ ದಿನವಂತು ಅತ್ಯಂತ ಮಂಗಳಕರವಾಗಿದೆ. ನಿಮ್ಮ ಈ ಸುಂದರವಾದ ವೇಷ-ಭೂಷಣವು ಈ ಪರಿಸರವನ್ನೇ ಬೆಳಗಿಸುವಂತಿದೆ. ಮಾಶಾ ಅಲ್ಲಾಹ್! ಅದರಲ್ಲೂ ನಿಮ್ಮೀ ನೀಲಿ ಪೇಟವಂತೂ ಚಿನ್ನದ ಮುಕುಟಕ್ಕೆ ವಜ್ರದ ಕಲಶವಿಟ್ಟಂತಿದೆ"

ವ್ಯಾಪಾರಿಯು ಮೊದಲು ತನ್ನ ಪೇಟವನ್ನು ಸರಿಯಾಗಿ ದೃಷ್ಟಿ ಹರಿಸಿ ನೋಡಿಕೊಂಡರು. ಮತ್ತು ಮತ್ತೂ ದೃಷ್ಟಿಯನ್ನು ಬದಲಿಸಿಕೊಳ್ಳುತ್ತಾ ನೋಡಿದರು. ನಂತರ ತುಂಬಿದ ಆತ್ಮವಿಶ್ವಾಸದಿಂದ ಹೇಳಿದರು,

"ಸಹೋದರಾ... ನನ್ನ ಸಹೋದರಾ ನನ್ನ ಪೇಟ ಬೆಳ್ಳಗಿದೆ. ಶುಭ್ರವಾಗಿದೆ"ಅವನು ಹೇಳಿದ "ಹೇ ಇದೇನು? ನೀಲಿ ಪೇಟವನ್ನು ಬಿಳಿ ಎನ್ನುತ್ತಿದ್ದೀರಿ? ನಿಮ್ಮ ಬುದ್ಧಿಗೇನಾಗಿದೆ? ಏನೇ ಇರಲಿ ಪೇಟವು ತುಂಬಾ ಸುಂದರವಾಗಿದೆ" ಇಷ್ಟು ಹೇಳಿ ಅವನು ಸಲಾಮ್ ಹೇಳಿ ನಡೆದುಬಿಟ್ಟ. ವ್ಯಾಪಾರಿ ಚೀರಾಡುತ್ತಲೇ ಇದ್ದರು! "ನನ್ನ ಪೇಟವು ಬೆಳ್ಳಗಿದೆ... ನನ್ನ ಪೇಟವು ಬೆಳ್ಳಗಿದೆ" ಬಳಿಕ ಅವರು ಪೇಟವನ್ನು ತೆಗೆದು ಹಿಂದೆ-ಮುಂದೆ ತಿರುಗಿಸಿ ನೋಡಿದರು. ಪೇಟವು ಬೆಳ್ಳಗಿರುವುದನ್ನು ದೃಢೀಕರಿಸಿಕೊಂಡುರು. ಬಳಿಕ ಮತ್ತೆ ಅದನ್ನು ತಲೆಗೇರಿಸಿದರು. ಠೀಕು-ಠೀಕಾಗಿ

ಅಂಗಡಿಯ ತನ್ನ ಆಸನದಲ್ಲಿ ವಿರಾಜಮಾನರಾದರು ಮತ್ತು ಪದೇ ಪದೇ ಭುಜದ ಮೇಲೆ ಇಳಿದುಕೊಂಡಿದ್ದ ತನ್ನ ಪೇಟದ ತುದಿಯನ್ನು ನೋಡುತ್ತಲೇ ಇದ್ದರು. ಸ್ವಲ್ಪ ಸಮಯ ಕಳೆಯುತ್ತಿದ್ದಂತೆ ಆ ನಾಲ್ವರಲ್ಲಿ ನಾಲ್ಕನೇಯವನು ಕೊನೆಯ ಎಲೆಯನ್ನು ಎಸೆಯಲು ಅಲ್ಲಿ ಹಾಜರಾದನು. ಮತ್ತು ಹೇಳಿದನು, "ಮರ್‌ಹಬಾ ಸಹೋದರಾ, ಮರ್‌ಹಬಾ, ಮಾಶಾ ಅಲ್ಲಾಹ್! ನಿಮ್ಮೀ ಕೆಂಪು ಪೇಟವನ್ನು ನೀವು ಎಲ್ಲಿಂದ ಖರೀದಿಸಿದಿರಿ? ವ್ಯಾಪಾರಿಯು ತನ್ನೆಲ್ಲ ಶಕ್ತಿಯನ್ನು ಬಳಸಿಕೊಂಡು ಕೂಗಿ ಹೇಳಿದರು "ನನ್ನ ಪೇಟವು ನೀಲಿ ಬಣ್ಣದ್ದಾಗಿದೆ" ಅವನು ಹೇಳಿದನು, "ಅರೆ, ಇಲ್ಲ ಸಹೋದರಾ! ಇದು ಕೆಂಪು ಬಣ್ಣವಾಗಿದೆ" ಈಗ ವ್ಯಾಪಾರಿಯು ಸ್ಥಿಮಿತ ಕಳೆದುಕೊಂಡರು. ಚೀರಿ ಹೇಳಿದರು, "ಇಲ್ಲಾ... ಇದರ ಬಣ್ಣ ಹಸಿರಾಗಿದೆ. ಇಲ್ಲ, ಇಲ್ಲ..... ಬಿಳಿಯಾಗಿದೆ... ಇಲ್ಲಾ ನೀಲಿ.... ಕೆಂಪು....

ನಂತರ ನಗಾಡುತ್ತಾ, ಬಳಿಕ ಚೀರಾಡುತ್ತಾ... ಕಡೆಗೆ ಕೂಗಾಡುತ್ತಾ ಹೇಳಿದರು, ನೀಲಿ... ಕೆಂಪು,... ಹಸಿರು... ಹಳದಿ ಹಾಗೇ ಅವರು ಕುಳಿತಲ್ಲಿಂದ ಎದ್ದು ನಿಂತರು... ನಿಂತಲ್ಲಿಂದ ನೆಗೆದರು... ಅಂಗಡಿ ಬಿಟ್ಟು ಬೀದಿ ಗಿಳಿದರು....

ಇಬ್ನ್ ಹಝುಮ್ ಹೇಳುತ್ತಾರೆ,

ಈ ರೀತಿಯಲ್ಲಿ ಆ ವ್ಯಾಪಾರಿಯು ಹುಚ್ಚರಾಗಿ ಬಿಟ್ಟರು. ನಾನವರನ್ನು ಬಹಳಷ್ಟು ಸಲ ನೋಡಿದೆ... ಅವರು ಉಂದುಲಿಸ್‌ನ ಹಾದಿ-ಬೀದಿಗಳಲ್ಲಿ ಅಡ್ಡಾಡಿಕೊಂಡಿದ್ದರು... ಮಕ್ಕಳು ಅವರನ್ನು ಕಲ್ಲು ಹೊಡೆದು ಸತಾಯಿಸುತ್ತಿದ್ದರು....

ಇಲ್ಲಿ ಆಲೋಚಿಸಲಿಕ್ಕಿರುವ ವಿಷಯವೆಂದರೆ, ಕುಶಾಗ್ರಮತಿಯಾದ ಓರ್ವನನ್ನು ಅವರು ಹೇಗೆ ಮತಿಹೀನನಾಗಿ ಮಾಡಿಬಿಟ್ಟರು ಎನ್ನುವುದಾಗಿದೆ. ಅವರು ಅಸೂಯೆಯಿಂದ ಅವರ ಶತ್ರುವಿನ ಕೆಲಸ ಕಾರ್ಯಗಳನ್ನಷ್ಟೇ ಕೆಡಿಸಿದ್ದಲ್ಲ. ಅವರು ಅವರನ್ನು ಕೆಲಸಕ್ಕೇ ಬಾರದವನಾಗಿ ಮಾಡಿಬಿಟ್ಟರು. ವ್ಯಾಪಾರದಲ್ಲಿ ನೇರವಾಗಿ ಸ್ಪರ್ಧಿಸಲಾರದ ಅಸಮರ್ಥರು ನ್ಯಾಯ-ನೀತಿ-ಧರ್ಮವನ್ನು ಕಡೆಗಣಿಸಿ ಮೋಸ-ವಂಚನೆಯನ್ನೇ ನೆಚ್ಚಿಕೊಂಡಂತಹಾ ಜನರೇ ಇಷ್ಟೆಲ್ಲವನ್ನು ಮಾಡಬಹುದಾಗಿದ್ದರೆ, ಅಲ್ಲಾಹನ ವಚನ ಮತ್ತು ಪ್ರವಾದಿಗಳ ಚರ್ಯೆಯಿಂದ ಬೆಳಕನ್ನೂ, ಜ್ಞಾನವನ್ನೂ, ಚೈತನ್ಯವನ್ನೂ ಪಡೆದ ನಾವು ಆತ್ಮಾರ್ಥವಾಗಿ ಪರಿಶ್ರಮಿಸಿದರೆ ಏನು ತಾನೇ ಅಸಾಧ್ಯ..... ?ಆದರೆ ನಾವು ನಮ್ಮ ವಿವೇಕವನ್ನು ಜಾಗೃತಗೊಳಿಸಿ ಅದರ ಕೈಯಲ್ಲಿ ಚಾಲನ ಶಕ್ತಿಯನ್ನು ಒಪ್ಪಿಸಬೇಕಾಗಿದೆ ಹೊರತು ಭಾವನೆಯ ಕೈಯಲಿಲ್ಲ.

ನಾನು ನಿಮಗೆ ಸೂಚಿಸುವುದೇನೆಂದರೆ, ನೀವು ನಿಮ್ಮ ಅನುಭವ ಇಚ್ಛಾಶಕ್ತಿ ಮತ್ತು ವಿವೇಕವನ್ನು ಬಳಸಿಕೊಂಡು ಒಂದು ನಿರ್ಧಾರಕ್ಕೆ ಬನ್ನಿರಿ. ನಂತರ ಅದನ್ನು ಬಳಸಿಕೊಂಡು ನಿರಂತರ ಪ್ರಯತ್ನಶೀಲರಾಗಿರಿ ಮತ್ತು ನೀವು ನನ್ನೊಂದಿಗೆ "ನಾನು ನನ್ನ ಜೀವನವನ್ನು ಬದಲಿಸಲು ಶಕ್ತನಾಗಲಿಲ್ಲ"ವೆಂದು ಹೇಳಿದರೆ, ಉತ್ತರವಾಗಿ ನಾನು "ಇನ್ನಷ್ಟು ಪ್ರಯತ್ನಿಸಿ ನೋಡಿ. ನೀವು

ಖಂಡಿತ ಬದಲಾಗುತ್ತೀರಿ"ಎಂದಷ್ಟೇ ಹೇಳಬಲ್ಲೆ. ಮತ್ತೆ ನೀವು "ನಾನು ಆ ಕ್ರಮವನ್ನು ಕಲಿತೇ ಇಲ್ಲ"ವೆಂದು ಹೇಳಿದರೆ, ನಾನು ಹೇಳುವೆ, "ನೀವು ಆ ಕ್ರಮವನ್ನು ಕಲಿತುಕೊಳ್ಳಿರಿ. ನೀವೇನು ಪ್ರವಾದಿ (ಸ)ರವರ ಈ ಹದೀಸ್ ಕೇಳಿಲ್ಲವೇ.

وَلَكَ مَا لَنَا وَعَلَيْكَ مَا عَلَيْنَا

"ಅರಿವು ಕಲಿಯುವುದರಿಂದಷ್ಟೇ ಜ್ಞಾನ ಸಿದ್ಧಿಸುತ್ತದೆ
ಸಹನೆ ಅವಲಂಬಿಸುವುದರಿಂದಷ್ಟೇಪ್ರಾಪ್ತಿಯಾಗುತ್ತದೆ"

(ಸಹೀಹುಲ್ ಜಾಮಿಅಸ್ಸಗೀರ್ ಅಲ್ಬಾನಿ, ಹದೀಸ್ ನಂಬ್ರ 2328)

**ಉಪ-ಸಂಹಾರ**

**"ತನ್ನ ಬುದ್ಧಿ, ಅರಿವು ಮತ್ತು ಸಾಮರ್ಥ್ಯವನ್ನು ವಿಸ್ತರಿಸುವುದು ಅಭಿವೃದ್ಧಿಪಡಿಸಿಕೊಳ್ಳುವಷ್ಟೇ ಸಾಧಕನ ಮಾನದಂಡವಲ್ಲ. ಬದಲಾಗಿ, ಜನರ ವ್ಯಕ್ತಿತ್ವವನ್ನು ಅರಳಿಸುವ ಮತ್ತು ಕೆಲವೊಮ್ಮೆ ಅದನ್ನು ಸಂಪೂರ್ಣವಾಗಿ ಬದಲಿಸಬಲ್ಲ ಪ್ರೌಢಿಮೆಯೇ ಸಾಧಕನ ಮಾನದಂಡವಾಗಿದೆ"**



# ಗಮನಾರ್ಹರೆನಿಸಿರಿ

ನೀವು ಕಂಡಿರುತ್ತೀರಿ, ಸಭೆ-ಸಮಾರಂಭಗಳಲ್ಲಿ ಕೆಲವೊಮ್ಮೆ ಚರ್ಚೆ-ಸಂವಾದವನ್ನು ನಡೆಸುವ ಜನರು ಪರಸ್ಪರ ಮಾತಿನ ಮಿತಿಯನ್ನು ಮೀರಿ, ಆರೋಪ ಪ್ರತ್ಯಾರೋಪಗಳಿಗಿಳಿದು ಹೈ - ಕೈ ನಡೆಸುತ್ತಾರೆ. ವಾಸ್ತವದಲ್ಲಿ ಮಾತು, ಸಂವಾದ ಚರ್ಚೆಗಳೆಲ್ಲವೂ ಪರಸ್ಪರ ಹಿತಾಕಾಂಕ್ಷೆಯಿಂದ ನಡೆಯಬೇಕು. ಪರಸ್ಪರ ಸಹನೆ - ಸಹಾನುಭೂತಿ ಅಲ್ಲಿ ವ್ಯಕ್ತವಾಗಬೇಕು. ಪರಿಸ್ಥಿತಿ ಈ ರೀತಿ ಬಿಗಡಾಯಿಸಲು ಕಾರಣವೇನು ಎಂದು ನೀವೆಂದಾದರೂ ಆಲೋಚಿಸಿದ್ದೀರಾ.....? ಕಾರಣವಿಷ್ಟೆ. ಅರ್ಹತೆ-ಯೋಗ್ಯತೆ ಇಲ್ಲದ ಅವಿವೇಕಿಗಳಾದ ಜನರು ಇಂದು ಚರ್ಚೆ-ಸಂವಾದಗಳ ವೇದಿಕೆಗಳಲ್ಲಿ ಸ್ಥಾನ ಪಡೆದುಕೊಳ್ಳುತ್ತಿರುವುದೇ ಇದಕ್ಕೆ ಕಾರಣವಾಗಿದೆ.

ಇಬ್ಬರು ವಾಗ್ಮಿಗಳು ಕೆಲವೊಂದು ಸಾಮಾನ್ಯ ಶಬ್ದಗಳ ವ್ಯತ್ಯಾಸವಷ್ಟೇ ಇದ್ದರೂ ಉತ್ತಮ ಉಪನ್ಯಾಸ ನೀಡುವುದನ್ನು ನೀವು ಗಮನಿಸಿರಬಹುದು. ಆದರೆ ಆ ಪೈಕಿ ಒಬ್ಬರು ಮಾತಾಡುವಾಗ ಶ್ರೋತೃಗಳಲ್ಲಿ ಹಲವರು ಗೊರಕೆ ಹೊಡೆಯುತ್ತಾರೆ. ಕೆಲವರು ಮಸೀದಿಯ ಕಂಬಗಳಿಗೆ, ಗೋಡೆಗಳಿಗೆ ಒರಗಿಕೊಂಡಿದ್ದರೆ ಇನ್ನು ಕೆಲವರು ಆಗಾಗ ಕುಳಿತಲ್ಲಿಂದ ಮಗ್ಗುಲು ಬದಲಿಸುತ್ತಾ ಸಂಕಟಪಡುತ್ತಿರುತ್ತಾರೆ. ಅದೇ ಇನ್ನೊಬ್ಬ ವ್ಯಕ್ತಿ ಭಾಷಣಕ್ಕೆ ತೊಡಗಿದರೆ ಸಭಿಕರು ಸಂಪೂರ್ಣ ಏಕಾಗ್ರತೆಯಿಂದ ಅವರ ಮಾತನ್ನು ಆಲಿಸುತ್ತಾರೆ. ಭಾಷಣಕರ್ತರು ತನ್ನ ಕೈ ಬೆರಳುಗಳನ್ನು ಅಲ್ಲಾಡಿಸುವಂತೆ ಶ್ರೋತೃಗಳು ತಮ್ಮ ಕೊರಳು ಅಲ್ಲಾಡಿಸುತ್ತಿರುತ್ತಾರೆ. ಯಾರ ಕಣ್ಣಲ್ಲೂ ನಿದ್ರೆಯು ಸುಳಿದಾಡುವುದಿಲ್ಲ. ಯಾರ ಮನದಲ್ಲೂ ಗೊದಲ - ಸಂಕಟಗಳು ಗೋಚರಿಸುವುದಿಲ್ಲ. ಇದೇಕೆ ಹೀಗೆ ಎಂದು ನೀವೆಂದಾದರೂ ಚಿಂತಿಸಿದ್ದೀರಾ....? ಇದು ತನ್ನ ಮಾತನ್ನು ಇತರರ ಮುಂದೆ ಅಭಿವ್ಯಕ್ತಿಗೊಳಿಸುವ ಪ್ರೌಢಿಮೆಯಾಗಿದೆ.

ನೀವು ಕೇಳಿರಬಹುದು, ಇಂತಿಂಥವರು ಸಭೆಯಲ್ಲಿ ಮಾತಿಗೆ ತೊಡಗಿದರೆ ಸಭಿಕರು ಏಕತಾನತೆಯಿಂದ ಅವರನ್ನೇ ದೃಷ್ಟಿಸತೊಡಗುತ್ತಾರೆ. ಅದೇ ಇನ್ನೊಬ್ಬರು ಮಾತಾಡಿದರೆ ಜನರ ಗಮನ ಎಲ್ಲೆಲ್ಲೋ ಸರಿದು ಬಿಡುತ್ತದೆ. ಜನರು ಆಕಡೆ-ಈಕಡೆ ನೋಡತೊಡಗುತ್ತಾರೆ ಮತ್ತು ಪರಸ್ಪರ ಮಾತಾಡುವುದನ್ನೋ ತಮ್ಮ ಮೊಬೈಲ್‌ನಲ್ಲಿ ಯಾರಿಗೋ ಸಂದೇಶ ರವಾನಿಸುವುದನ್ನೋ ಮಾಡತೊಡಗುತ್ತಾರೆ. ಹೀಗೇಕೆಂದು ನೀವು ಹೇಳಬಲ್ಲಿರಾ....? ಇದು ಮಾತಿನ ಮೋಡಿಯಾಗಿದೆ.

ಮದ್ರಸ ಅಥವಾ ಶಾಲೆಯ ವಠಾರದಲ್ಲಿ ನೋಡಿ, ಅಲ್ಲಿ ಒಂದು ಅಧ್ಯಾಪಕರನ್ನು ಯಾವಾಗಲೂ ವಿದ್ಯಾರ್ಥಿಗಳು ಮುತ್ತಿಕೊಂಡಿರುತ್ತಾರೆ. ಕೆಲವರು ಕೈ ಕುಲುಕಲು ಕೈ ಚಾಚುತ್ತಿದ್ದರೆ, ಕೆಲವರು ಅಭಿಪ್ರಾಯ ಕೇಳುತ್ತಿರುತ್ತಾರೆ. ಕೆಲವರು ಅವರ ಮುಂದೆ ತನ್ನ ಸಂಗತಿಯನ್ನು ಪ್ರಸ್ತುತಪಡಿಸುತ್ತಿರುತ್ತಾರೆ. ಈ ಅಧ್ಯಾಪಕರು ತನ್ನ ಕೋಣೆಯಲ್ಲಿದ್ದರೆ ಕ್ಷಣಾರ್ಧದಲ್ಲೇ ಅಲ್ಲಿ ವಿದ್ಯಾರ್ಥಿಗಳ ಹಿಂಡು ಬಂದು ಸೇರಿ ಬಿಡುತ್ತದೆ. ಅವರಲ್ಲಿ ಪ್ರತಿಯೊಬ್ಬರೂ ಅಧ್ಯಾಪಕರ ಸಾಮಿಪ್ಯವನ್ನೂ, ಅವರ ಗಮನವನ್ನೂ ಸೆಳೆದುಕೊಳ್ಳಲು ಪ್ರಯತ್ನಿಸುತ್ತಿರುತ್ತಾರೆ. ಒಂದು ಕಡೆ ಈ ದೃಶ್ಯವಾದರೆ, ಮತ್ತೊಂದು ಕಡೆ ಇನ್ನೊಂದು ಅಧ್ಯಾಪಕರು ಒಬ್ಬಂಟಿಯಾಗಿ

ನಡೆದಾಡುತ್ತಿರುತ್ತಾರೆ. ಶಾಲೆ ಅಥವಾ ಮದ್ರಸದಿಂದ ಏಕಾಂಗಿಯಾಗಿ ಹೊರಡುತ್ತಾರೆ. ಅವರೊಂದಿಗೆ ಯಾರೂ ದೂರು-ತರಾದೆಗಳನ್ನು ಹೇಳಿಕೊಳ್ಳುವುದಿಲ್ಲ. ಅವರಿಂದ ಅಭಿಪ್ರಾಯಗಳನ್ನು ಕೇಳುವವರಿಲ್ಲ. ಅವರೊಂದಿಗೆ ಮುಸಾಫಃ ಮಾಡಲು ಯಾರೂ ಕೈ ಚಾಚುವುದಿಲ್ಲ. ಹೀಗೇಕೆನ್ನುವ ಕುರಿತು ನೀವೇನಾದರೂ ಅರಿತುಕೊಂಡಿದ್ದೀರಾ....? ಇದು ಜನರೊಂದಿಗೆ ಬೆರೆಯುವ ನಿಯಮವಾಗಿದೆ.

ಒಬ್ಬ ವ್ಯಕ್ತಿ ಒಂದು ಸಭೆಯೊಳಗೆ ಪ್ರವೇಶಿಸಿದನೆಂದರೆ ಎಲ್ಲರೂ ಅವನನ್ನು ನೋಡಿ ಅವನನ್ನು ಮಾತಾಡಿಸಿಕೊಂಡು ಅವನೊಂದಿಗೆ ಕಲೆತು ಹರ್ಷತುಂದಿಲರಾಗುತ್ತಾರೆ ಮತ್ತು ಅತೀವ ಭಾವಪರವಶತೆಗೆ ಒಳಗಾಗುತ್ತಾರೆ. ಪ್ರತಿಯೊಬ್ಬರೂ ಅವರ ಅಕ್ಕಪಕ್ಕದಲ್ಲಿ ಸ್ಥಳ ಪಡೆಯಲು ಪ್ರಯತ್ನಿಸುತ್ತಾರೆ. ಅದೇ ಇನ್ನೊಬ್ಬನು ಸಭೆಗೆ ಬಂದರೆ ಜನರು ಕೇವಲ ಕಾಟಾಚಾರಕ್ಕಾಗಿ ಅವನೊಂದಿಗೆ ಹಲ್ಲು ಕಿರಿಯುತ್ತಾರೆ. ಮುಲಾಜಿಗಾಗಿ ಕೈ ಕುಲುಕುತ್ತಾರೆ. ಅವನು ಸಭೆಯಲ್ಲಿ ಕುಳಿತುಕೊಳ್ಳಲು ಸ್ವತಃ ಒಂದು ಆಸನವನ್ನು ಅನ್ವೇಷಿಸಿಕೊಳ್ಳುತ್ತಾನೆ. ಅವನಿಗಾಗಿ ಯಾರೂ ಸ್ಥಳ ಬಿಟ್ಟು ಕೊಡುವುದಿಲ್ಲ. ಯಾರೂ ಅವನು ತನ್ನ ಬಳಿ ಕುಳಿತುಕೊಳ್ಳಲೆಂದು ಬಯಸುವುದಿಲ್ಲ. ಯೋಚಿಸಿ ನೋಡಿ, ಇದೆಲ್ಲಾ ಏಕೆ ಹೀಗಾಗುತ್ತದೆ?

ಇವರು ಜನರನ್ನು ತಮ್ಮ ಕಡೆಗೆ ಆಕರ್ಷಿಸುವ ಮತ್ತು ಅವರ ಮೇಲೆ ತಮ್ಮ ಪ್ರಭಾವ ಬೀರುವ ಕಲೆ ಕರಗತ ಮಾಡಿಕೊಂಡಿರುವರು. ಒಬ್ಬ ತಂದೆ ಮನೆಗೆ ಪ್ರವೇಶಿಸುವಾಗ ಮಕ್ಕಳು ಓಡಿಬಂದು ಬಿಗಿದಪ್ಪಿಕೊಂಡು ಮುತ್ತಿಕ್ಕುತ್ತಾರೆ. ಅದೇ ಇನ್ನೊಬ್ಬ ತಂದೆ ಮನೆಗೆ ಪ್ರವೇಶಿಸುವಾಗ ಮಕ್ಕಳು ಅವನೆಡೆಗೆ ತಿರುಗಿಯೂ ನೋಡುವುದಿಲ್ಲ. ಕೆಲವರು ಸರ್ಪವನ್ನು ನೋಡಿದಂತೆ ಎಗರಿ ಬೀಳುತ್ತಾರೆ. ತಂದೆ ಮನೆಯೊಳಗೆ ಬಂದರೆ ಮಕ್ಕಳು ಮನೆಯಿಂದ ಹೊರ ನಡೆಯುತ್ತಾರೆ. ತಂದೆ ಹೊರಗಿದ್ದರೆ ಮಕ್ಕಳು ಒಳಗೆ, ಇದರಿಂದ ಮನೆಯ ವಾತಾವರಣ ಉಸಿರುಗಟ್ಟುವಂತಿರುತ್ತದೆ. ಪತ್ನಿಯೂ ಇನ್ನೊಂದು ಕಡೆ ಮನೆಯ ಮೂಲೆ ಸೇರಿಕೊಳ್ಳುತ್ತಾಳೆ. ಶಾಂತಚಿತ್ತದಿಂದ ಹೀಗೇಕೆ ಆಗುತ್ತದೆಂದೊಮ್ಮೆ ಆಲೋಚಿಸಿ ನೋಡಿರಿ. ಇದು ಮಕ್ಕಳೊಂದಿಗೆ ಸಂಪರ್ಕ-ಸಂಬಂಧ ಬೆಳೆಸುವಲ್ಲಿ ಅಳವಡಿಸಿಕೊಂಡ ರೀತಿ ನೀತಿಯಲ್ಲಿನ ವ್ಯತ್ಯಾಸದ ಫಲವಾಗಿದೆ.

ಇಂತಹಾ ಉದಾಹರಣೆಗಳನ್ನೇ ಮಸೀದಿಯ ವಿಷಯದಲ್ಲೂ ಮದುವೆಗೆ ಸಂಬಂಧ ಹುಡುಕುವ ವಿಷಯದಲ್ಲೂ ನೀಡಬಹುದಾಗಿದೆ.

ಇತರರೊಂದಿಗೆ ವ್ಯವಹರಿಸುವಾಗ ಜನರು ಯಾವ ರೀತಿ ಗುಣ-ಸ್ವಭಾವ-ಮಾತು-ನಡವಳಿಕೆಗಳನ್ನು ಬಳಸುತ್ತಾರೋ, ಇತರರೂ ಅವರೊಂದಿಗೆ ಅದೇ ರೀತಿಯಲ್ಲಿ ವ್ಯವಹರಿಸುತ್ತಾರೆ ಮತ್ತು ಸ್ಪಂದಿಸುತ್ತಾರೆ. ಜನರ ಹೃದಯದಲ್ಲಿ ನಮ್ಮ ಕುರಿತು ಉತ್ತಮ ಅಭಿಪ್ರಾಯವನ್ನು, ಪ್ರೀತಿ-ವಿಶ್ವಾಸವನ್ನು ಉಂಟು ಮಾಡುವುದು ಹೇಗೆ ಎನ್ನುವ ಕುರಿತು ಊಹಿಸಿಕೊಳ್ಳುವುದು ಸಾಧ್ಯವಿಲ್ಲದ ಮಾತಾಗಿದೆ. ಆದರೆ ಇದು ಪರ್ವತವೇರುವಷ್ಟು ಪರಿಶ್ರಮದ ಕೆಲಸವೇನಲ್ಲ. ನನ್ನ ಅನುಭವ ಮತ್ತು ಚಿಂತನೆಯ ಪ್ರಕಾರ ಕೆಲವು ಸುಲಭ ವಿಧಾನಗಳಿಂದ ಪಕ್ವವಾದ ಇರಾದೆ ಮತ್ತು ಪ್ರಯತ್ನಗಳಿಂದ ಇದನ್ನು ಸಾಧಿಸಬಹುದಾಗಿದೆ. ಇದು ಕೇವಲ ಕೂಲಿ ಪಡೆಯಲು ನಡೆಸುವ

ಪರಿಶ್ರಮದಂತಾಗಬಾರದು. ಅದನ್ನು ನಿರಂತರ ಅಳವಡಿಸಿಕೊಳ್ಳಬೇಕು ಮತ್ತು ನಡೆ-ನುಡಿಗಳಲ್ಲೆಲ್ಲಾ ಅದು ಪ್ರತಿಫಲನಗೊಳ್ಳಬೇಕು.

ಜನರು ನಮ್ಮ ಸ್ವಭಾವ ಮತ್ತು ಮಾತುಗಳಿಂದ ಖಂಡಿತ ಪ್ರಭಾವಿತರಾಗುತ್ತಾರೆ. ಕೆಲವೊಮ್ಮೆ ನಮಗೆ ಆ ಕುರಿತು ಪರಿವೆಯೇ ಇರುವುದಿಲ್ಲ. ನಾನು ಕಳೆದ 13 ವರ್ಷದಿಂದ ಮಿಲಿಟರಿ ಕಾಲೇಜಿನ ಜಾಮಿಅ್ ಮಸ್ಜಿದ್‌ನಲ್ಲಿ ಇಮಾಮತ್ ಮತ್ತು ಖಿತಾಬತ್‌ನ ಕೆಲಸವನ್ನು ನಿರ್ವಹಿಸುತ್ತಾ ಇದ್ದೇನೆ. ಮಸೀದಿಗೆ ಹೋಗುವಾಗ ನಾನು ಅದರ ಪ್ರಮುಖ ದ್ವಾರದಲ್ಲಿ ಪ್ರವೇಶಿಸುತ್ತೇನೆ. ಅಲ್ಲಿ ಒಬ್ಬರು ಪಹರೆದಾರರನ್ನು ನಿಯುಕ್ತಿಗೊಳಿಸಲಾಗಿದೆ. ಬಾಗಿಲನ್ನು ಸರಿಯಾದ ಸಮಯದಲ್ಲಿ ತೆರೆಯುವುದು ಮತ್ತು ಮುಚ್ಚುವುದು ಅವರ ಹೊಣೆಗಾರಿಕೆಯಾಗಿದೆ. ಅಲ್ಲಿಂದ ಹಾದು ಹೋಗುವಾಗಲೆಲ್ಲಾ ನಾನು ಅವರನ್ನು ಕಂಡು ಮಂದಹಾಸ ಬೀರಲು ಪ್ರಯತ್ನಿಸುತ್ತೇನೆ. ಅದರಂತೆ ನಾನು ನನ್ನ ಕೈಗಳಿಂದ ಅವರಿಗೆ ಸಲಾಮ್ ಹೇಳಿ ನಸುನಗುತ್ತಾ ಅಲ್ಲಿಂದ ಹಾದು ಹೋಗುತ್ತಿದ್ದೆ. ನಮಾಝ್‌ನ ಬಳಿಕ ನಾನು ನನ್ನ ಗಾಡಿಯಲ್ಲಿ ಕುಳಿತು ಮನೆಗೆ ಮರಳುತ್ತಿದ್ದೆ. ನಮಾಝ್‌ನ ಸಮಯದಲ್ಲಿ ಸಂದೇಶಗಳು ಮತ್ತು ಕರೆಗಳು ನಿಶ್ಶಬ್ಧ ಸ್ಥಿತಿಯಲ್ಲಿರುವ ಮೊಬೈಲ್‌ನಲ್ಲಿ ತುಂಬಿಕೊಂಡಿರುತ್ತದೆ. ನಾನು ಗಾಡಿಯಲ್ಲಿ ಕುಳಿತು ಮನೆಯ ದಾರಿಯಲ್ಲಿ ಅದನ್ನು ಓದುತ್ತಲೂ ಉತ್ತರಿಸುತ್ತಲೂ ಇರುತ್ತೇನೆ. ಆದ್ದರಿಂದ ಹಿಂದೆ ಬರುವಾಗ ನಾನು ಅವರಿಗೆ ಸಲಾಮ್ ಹೇಳುವುದಾಗಲೀ-ಮಂದಹಾಸ ಬೀರುವುದಾಗಲೀ ಮಾಡುವುದಿಲ್ಲ.

ಒಂದು ದಿನ ನಾನು ಮಸೀದಿಯಿಂದ ಹೊರಬರುವಾಗ ಪಹರೆದಾರರು ನನ್ನನ್ನು ತಡೆದರು. ನಾನು ಆಶ್ಚರ್ಯದಿಂದ ನೋಡಲು ಅವರು ಕೇಳಿದರು "ಯಾ ಶೈಖ್! ನಿಮಗೇನು ನನ್ನ ಮೇಲೆ ಕೋಪವೇ?" ನಾನು ಕೇಳಿದೆ "ಯಾಕೆ?" ಅವರು ಹೇಳಿದರು, "ಮಸೀದಿಯ ಕಡೆ ಹೋಗುವಾಗ ನೀವು ನಗುತ್ತೀರಿ - ಸಲಾಮ್ ಹೇಳುತ್ತೀರಿ... ಆಗ ನೀವು ತುಂಬಾ ಚಂದ ಕಾಣುತ್ತೀರಿ. ಆದರೆ, ಮರಳಿ ಬರುವಾಗ ನೀವು ಹರ್ಷಚಿತ್ತರಾಗಿ ಕಾಣುವುದೂ ಇಲ್ಲ, ನೀವು ನಗೆ ಬೀರುವುದೂ ಇಲ್ಲ" ಅವರು ಓರ್ವ ಸಾಮಾನ್ಯ ವ್ಯಕ್ತಿಯಾಗಿದ್ದರು, ಅವರು ಆಣೆ ಹಾಕುತ್ತಾ ಅವರಿಗೆ ನನ್ನ ಮೇಲೆ ಪ್ರೀತಿ ಇದೆ. ನನ್ನನ್ನು ಕಂಡರೆ ಅವರಿಗೆ ಖುಷಿಯಾಗುತ್ತದೆ ಎಂದೆಲ್ಲಾ ಹೇಳತೊಡಗಿದರು. ನಾನು ಅವರಿಗೆ ನನ್ನ ವರ್ತನೆಯ ಕಾರಣವನ್ನು ಹೇಳಿದೆ ಮತ್ತು ಅವರ ಭಾವನೆಗಳನ್ನು ಹಂಚಿಕೊಂಡೆ. ಅವರು ಮತ್ತೆ ತನ್ನ ಕಾರ್ಯದಲ್ಲಿ ಮಗ್ನರಾಗಿ ಬಿಟ್ಟರು.

ನಾವು ಒಂದು ವಾಡಿಕೆ ಅಥವಾ ಔಪಚಾರಿಕತೆಯ ನೆಲೆಯಲ್ಲಿ ಒಂದು ಸದ್ವರ್ತನೆಯನ್ನು ಅಭ್ಯಾಸ ಮಾಡಿಕೊಂಡರೂ ಅದು ಬರುಬರುತ್ತಾ ನಮ್ಮ ಪ್ರಕೃತಿಯ ಒಂದು ಅಂಗವಾಗಿ ಮಾರ್ಪಡುತ್ತದೆ. ಒಂದೊಮ್ಮೆ ನಾವು ಕಾರಣಾಂತರದಿಂದ ಆ ಕುರಿತು ನಿರ್ಲಕ್ಷ್ಯ ತೋರಿದರೂ ಜನರು ಅದನ್ನು ಗಮನಿಸಿ ಬಿಡುತ್ತಾರೆ.

**ಉಪಸಂಹಾರ :**

**"ಕೇವಲ ಹಣ ಸಂಪಾದನೆಯಲ್ಲೇ ಮಗ್ನನಾಗಬೇಡ". ಜನರನ್ನು ಕಳೆದುಕೊಂಡು ಬಿಡುತ್ತೀಯಾ..... ಹಾಗೆ ನೋಡಿದರೆ, ಜನರನ್ನು ಪಡೆದುಕೊಳ್ಳುವುದು. ಹಣ ಸಂಪಾದನೆಯು ಒಂದು ಮಾಧ್ಯಮವಾಗಿದೆ".**

# ಅನುಭವಗಳಿಂದ ಪ್ರಯೋಜನ ಪಡೆಯಿರಿ

ಮನುಷ್ಯರಿಗೆ ಅವರ ಪಾಂಡಿತ್ಯ ಮತ್ತು ಅನುಭವಗಳು ಬಹಳ ದೊಡ್ಡ ಸಂಪತ್ತಾಗಿರುತ್ತದೆ. ಇದರಿಂದ ಅವನ ಬುದ್ಧಿ ಪಕ್ವಗೊಂಡು ಆಕರ್ಶಕ ವ್ಯಕ್ತಿತ್ವ ಅವನಲ್ಲಿ ಉಂಟಾಗುತ್ತದೆ. ಇದು ಅವನ ಕುರಿತು ಗೌರವ-ಆಕರ್ಶಣೆ ಮತ್ತು ಕುತೂಹಲವನ್ನು ಸೃಷ್ಠಿಸುತ್ತದೆ. ಇಲ್ಲಿ ನಾನು ಉದ್ದೇಶಿಸುತ್ತಿರುವುದು ಪಾರತ್ರಿಕ ಪ್ರತಿಫಲವಲ್ಲ. ಬದಲಾಗಿ ಕಾಲೋಚಿತವಾಗಿ ಪ್ರಯೋಜನಕ್ಕೆ ಬರುವ ನಿಧಿಯಾಗಿದೆ. ನೈಜ ಸಂತೋಷ ಮತ್ತು ತೃಪ್ತಿಯನ್ನು ಅನುಭವಿಸಲು ಅನುಕೂಲಕರವಾದ ವಸ್ತುವಾಗಿದೆ.

ಆದ್ದರಿಂದ ನೀವು ಕೂಡಾ ನಿಮ್ಮ ಅರಿವು ಮತ್ತು ಅನುಭವಗಳಿಂದ ಪ್ರಯೋಜನ ಪಡೆಯಿರಿ. ಹಿರಿಯ-ಕಿರಿಯ, ಶ್ರೀಮಂತ-ಬಡವ, ಪರಿಚಿತ-ಅಪರಿಚಿತರಾದ ಎಲ್ಲರೊಂದಿಗೂ ಬೆರೆತುಕೊಂಡು ಅವರ ಒಳಿತು-ಕೆಡುಕುಗಳಲ್ಲಿ ಸ್ಪಂಧಿಸುತ್ತಾ ಇರಿ.

ನೀವು ನಿಮ್ಮ ವಿಧ್ಯೆ ಮತ್ತು ಅನುಭವಗಳನ್ನು ಕೆಟ್ಟ ಜನರ ಕೇಡಿನಿಂದ ಸುರಕ್ಷಿತರಾಗಲು, ಅವರಲ್ಲಿ ಪ್ರೀತಿ-ವಿಶ್ವಾಸ ಸಂಪಾದಿಸಲು ಮತ್ತು ಅವರಲ್ಲಿ ಒಳಿತಿನ ಪ್ರಜ್ಞೆ ಮೂಡಿಸಲು ಉಪಯೋಗಿಸಿಕೊಳ್ಳಿರಿ. ಹೌದು! ಮುಖ್ಯವಾಗಿ ಜನರನ್ನು ತಿದ್ದಿ-ತೀಡಿ, ಒಳಿತಿನೆಡೆಗೆ ಸಾಗಿಸಲು!

ಅಲೀ ಬಿನ್ ಜಹಮ್ ಒಬ್ಬ ಸಹಜ ಪ್ರವೃತ್ತಿಯ, ವಾಕ್ಚಾತುರ್ಯವುಳ್ಳ ಕವಿಯಾಗಿದ್ದರು. ಅವರು ಒರಟ-ದಾಕ್ಷಿಣ್ಯವಿಲ್ಲದ ಅರಬಿಯಾಗಿದ್ದು ಅವರು ಜೀವನದಲ್ಲಿ ಮರುಭೂಮಿಯ ಸರಹದ್ದಿನಿಂದ ಹೊರಗೆ ಕೂಡಾ ಜನ ಜೀವನವಿದೆ ಎನ್ನುವುದನ್ನೇ ಮನಗಂಡಿರಲಿಲ್ಲ.

ಅಂದು ಸಹನಶೀಲರೊಬ್ಬರು ಆಡಳಿತದಲ್ಲಿ ವಿರಾಜಮಾನರಾಗಿದ್ದರು. ಅವರ ಬಾಯಿಯಿಂದ ಹೊರಟ ಪ್ರತಿ ಶಬ್ದಗಳನ್ನು ಕಾರ್ಯರೂಪಕ್ಕೆ ತರಲಾಗುತ್ತಿತ್ತು. ಅಲೀ ಬಿನ್ ಜಹಮ್ ಒಂದು ದಿನ ಬಗ್ದಾದ್ ಪಟ್ಟಣಕ್ಕೆ ಬಂದಿದ್ದರು. ಅವರೊಬ್ಬರು ಕವಿಯಾಗಿದ್ದುದರಿಂದ ಖಲೀಪರನ್ನು ಪ್ರಶಂಶಿಸುವ ಒಂದು ಕಾವ್ಯವನ್ನು ಪ್ರಸ್ತುತಪಡಿಸಿದರೆ ಬಹುಮಾನ ಮತ್ತು ಪ್ರಶಸ್ತಿಗಳಿಸಬಹುದೆಂದು ಯಾರೋ ಅವರಿಗೆ ಹೇಳಿದರು. ಅವರು ಅದನ್ನು ಕೇಳಿಕೊಂಡು ಬಹಳ ಸಂತೋಷಗೊಂಡರು, ಖಲೀಫರ ಕಡೆಗೆ ನಡೆದು ಬಿಟ್ಟರು. ಸಹನಾಶೀಲರ ಆಸ್ಥಾನವು ಸಜ್ಜುಗೊಂಡಿತ್ತು. ಅವರು ತನ್ನ ಸ್ಥಾನದಲ್ಲಿ ಸಂಭ್ರಮದಿಂದ ವಿರಾಜಮಾನರಾಗಿದ್ದರು. ಕವಿಗಳು ತಮ್ಮ ಕಾವ್ಯ-ಕವನಗಳಿಂದ ಅವರನ್ನು ಬಣ್ಣಿಸಿ ಹಾಡುತ್ತಾ ಪ್ರಶಸ್ತಿಗಳನ್ನೂ-ಬಹುಮಾನಗಳನ್ನೂ ಗಿಟ್ಟಿಸಿಕೊಳ್ಳುತ್ತಿದ್ದರು.

ಅಲಿಬಿನ್‌ಜಹಮ್ ಕೂಡಾ ಖಲೀಫರ ಮದ್ಹ್ ಮಾಡುತ್ತಾ ಕವನ ವಾಚನ ಪ್ರಾರಂಭಿಸಿದರು. ಅದರ ಚರಣಗಳು ಹೀಗಿದ್ದವು.

أَنْتَ كَالْكَلْبِ فِي حِفَاظِكَ لِلْوُدِّ
وَكَالتَّيْسِ فِي قِرَاعِ الْخُطُوبِ

**"ನೀವು ಪ್ರೀತಿ-ವಿಶ್ವಾಸಗಳನ್ನು ಸಂರಕ್ಷಿಸಿಕೊಳ್ಳುವ, ಪ್ರಾಮಾಣಿಕತೆಯನ್ನು ಪಾಲಿಸುವ ವಿಷಯದಲ್ಲಿ ನಾಯಿಯಂತೆ ಮತ್ತು ಕಷ್ಟಪಾಡುಗಳನ್ನು ಸಹಿಸುವುದರಲ್ಲಿ ನೀವು ಗೂಳಿಯಂತೆ''**

أَنْتَ كَالدَّلْوِ لَا عَدِمْتُكَ دَلْواً
مِنْ كِبَارِ الدِّلَاءِ كَثِيرِ الذُّنُوبِ

**"ನೀವು ಬಾವಿಯ ನೀರೆತ್ತಿ ಕೊಡುವ ಪಾತ್ರೆಯಾಗಿದ್ದೀರಿ. ಎಂತಹಾ ಪಾತ್ರೆಯೆಂದರೆ ಅದನ್ನು ನಾನು ಕಳೆದುಕೊಳ್ಳಬಯಸಲಾರೆ.ಈ ಪಾತ್ರೆ ಬಾಲ್ದಿಯ ನೀರನ್ನು ಹೆಚ್ಚಿಸುತ್ತದೆ''**

ಈ ಮೊದಲು ಖಲೀಫರನ್ನು ಸೂರ್ಯ, ಚಂದ್ರ, ನಕ್ಷತ್ರಾದಿಗಳಿಗೆ ಹೋಲಿಸಲಾಗುತ್ತಿತ್ತು. ಆದರೆ ಅಲಿಬಿನ್‌ಜಹಮ್ ಖಲೀಫರನ್ನು ನಾಯಿ, ಗೂಳಿ, ಬಾವಿ, ಬಾಲ್ದಿಗಳಿಗೆ ಹೋಲಿಸುತ್ತಿದ್ದರು. ಖಲೀಫರು ಕೆಂಡಾ ಮಂಡಲವಾದರು. ಅವರ ಅಂಗರಕ್ಷಕರೂ ಕೆರಳಿ ಬಿಟ್ಟರು. ಖಡ್ಗಗಳು ನಗ್ನಗೊಂಡವು, ಚರ್ಮದಿಂದ ಮಾಡಿದ ಹಾಸಿಗೆ ಹಾಸಲಾಯಿತು. ಗಲ್ಲಿಗೇರಿಸುವವರು ಕವಿವರ್ಯರನ್ನು ವಧಿಸಲು ಸಿದ್ಧರಾದರು. ಅಷ್ಟರಲ್ಲಿ ಖಲೀಫರ ಮನದಲ್ಲಿ ಅಲಿ ಬಿನ್ ಜಹಮ್‌ರವರ ಪ್ರಕೃತಿ ಮತ್ತು ಅವರ ಅಜ್ಞಾನವೇ ಅವರನ್ನು ಈ ಕೃತ್ಯಕ್ಕೆ ಪ್ರೇರೇಪಿಸಿರಬಹುದು ಎಂಬ ಸಂದೇಹ ಉಂಟಾಯಿತು. ಖಲೀಫ ಅವರ ಪ್ರಕೃತಿಯನ್ನು ಬದಲಿಸುವ ನಿರ್ಧಾರಕ್ಕೆ ಬಂದರು. ಅಲಿಬಿನ್ ಜಹಮ್‌ರನ್ನು ಸರ್ವ ಸೌಕರ್ಯಗಳಿರುವ ಸುಂದರವಾದ ಮಹಲಿನಲ್ಲಿ ಕೊಂಡೊಯ್ಯುವಂತೆ ಅವರು ಆದೇಶಿಸಿದರು ಮತ್ತು ಪ್ರತಿನಿತ್ಯ ಬೆಳಿಗ್ಗೆ ಮತ್ತು ಸಂಜೆ ಪಟ್ಟಣದಲ್ಲಿ ಲಭಿಸುವ ಅತ್ಯುನ್ನತವಾದ ಆಹಾರಗಳನ್ನೂ, ಪಾನೀಯಗಳನ್ನೂ, ಫಲಗಳನ್ನೂ, ಉಡುಪು ಮತ್ತು ದಿನೋಪಯೋಗಿ ವಸ್ತುಗಳನ್ನು ಪೂರೈಸುವಂತೆಯೂ ಆಜ್ಞೆ ಇತ್ತರು. ಮಹಲಿನಲ್ಲಿ ಐಷಾರಾಮವನ್ನು ಅನುಭವಿಸುತ್ತಾ ಅಲಿಬಿನ್ ಜಹಮ್ ಸುಖಾಡಂಬರದ ರುಚಿ ಸವಿದರು. ಹಳ್ಳಿಗಾಡಿನಲ್ಲಿ ಅವರು ದಿಂಬಿನ ಮೇಲೆ ಕುಳಿತುಕೊಳ್ಳುತ್ತಿದ್ದರು. ಇಂದು ಅವರು ಪಟ್ಟಣದ ದೊಡ್ಡ ದೊಡ್ಡ ಕವಿಗಳ ಜೊತೆ ವೇದಿಕೆ ಹಂಚಿಕೊಳ್ಳುತ್ತಿದ್ದಾರೆ. ಏಳು ತಿಂಗಳು ಹೀಗೆ ಕಳೆದು ಹೋದವು. ಒಂದು ರಾತ್ರಿ ಖಲೀಫ ಸಾಮಾನ್ಯವಾಗಿ ನಡೆಯುವ ತನ್ನ ಆಸ್ಥಾನ ಸಭೆಯಲ್ಲಿ ಆಸೀನರಾಗಿದ್ದರು. ಅವರಿಗೆ ಇದ್ದಕ್ಕಿದ್ದಂತೆಯೇ ಆಲಿ ಬಿನ್ ಜಹಮ್‌ರ ನೆನಪಾಯಿತು. ಆ ಪ್ರಕಾರ ಅವರು ಆಲಿಬಿನ್ ಜಹಮ್‌ರನ್ನು ಕರೆ ತರಲು ಆದೇಶವಿತ್ತರು. ಸೇವಕರು ಹೋಗಿ ಅವರನ್ನು ಕರೆತಂದು ಆಸ್ಥಾನದಲ್ಲಿ ಹಾಜರು ಪಡಿಸಿದರು. ಖಲೀಪಾ ಆಜ್ಞೆ ಇತ್ತರು. ಅಲಿಬಿನ್‌ಜಹಮ್! ನಮ್ಮ ಕುರಿತು ಒಂದು ಕಾವ್ಯ ಪ್ರಸ್ತುತ ಪಡಿಸಿ.

ಅಲಿಬಿನ್ ಜಹಮ್ ಪ್ರಾರಂಭಿಸಿದರು.

عُيُونُ الْمَهَا بَيْنَ الرُّصَافَةِ وَالْجِسْرِ
جَلَبْنَ الْهَوَى مِنْ حَيْثُ أَدْرِي وَلَا أَدْرِي

**“ರುಸಾಫ ಮತ್ತು ಪುಲ್‌ನ ನಡುವೆ ನೈಲ್ ಹಾಡಿತು ಕಣ್ಣುಗಳು ವ್ಯಾಮೋಹದ ಕಿಡಿಗೆ ತುಪ್ಪ ಸುರಿದಂತೆ, ನನಗೆ ತಿಳಿದಂತೆ ಮತ್ತು ನನಗೆ ತಿಳಿಯದಂತೆ”**

أَعَدْنَ لِيَ الشَّوْقَ الْقَدِيمَ وَلَمْ أَكُنْ
سَلَوْتُ وَلَكِنْ زِدْنَ جَمْراً عَلَى جَمْرِ

**“ಅವರು ಹಳೆಯ ಅಭಿಲಾಶೆಗಳನ್ನು ಮತ್ತೊಮ್ಮೆ ಕೆಣಕಿ ಬಿಟ್ಟರು ನನ್ನ ವೇದನೆಗಳಿನ್ನೂ ಅಪರಾಧವೆನಿಸಿರಲಿಲ್ಲ. ಆ ಕಣ್ಣುಗಳು ಕೆಂಡದ ಮೇಲೆ ಕೆಂಡವನ್ನಿಟ್ಟು ಉರಿವ ಬೆಂಕಿಗೆ ತುಪ್ಪ ಸುರಿದರು”**

ಹೀಗೆ ಅಲಿಬಿನ್ ಜಹಮ್ ಬುದ್ಧಿ ಮತ್ತು ಯುಕ್ತಿಯನ್ನು ತಲುಪುವಂತಹಾ ಚರಣಗಳಿಂದ ಜನರ ಹೃದಯ ಗೆಲ್ಲ ತೊಡಗಿದರು. ಅವರು ತನ್ನ ಕವನಗಳಲ್ಲಿ ಖಲೀಫರನ್ನು ಸೂರ್ಯ, ಚಂದ್ರ ಮತ್ತು ತಲವಾರುಗಳಿಗೆ ಹೋಲಿಸಿ ಮೆಚ್ಚಿಗೆ ಪಡೆದರು.

ಖಲೀಫಾ ಒಂದು ಯುಕ್ತಿಪೂರ್ಣವಾದ ಉಪಾಯದಿಂದ ಇಬ್ನ್ ಹಜಮ್‌ರವರ ಅದೃಷ್ಟವನ್ನು ಬದಲಿಸಿ ಬಿಟ್ಟರು. ಅವರ ಪ್ರಾಕೃತಿಕ ಗುಣ-ಸ್ವಭಾವಕ್ಕೆ ಮತ್ತೊಂದು ರೂಪ ಕೊಟ್ಟರು. ನಮ್ಮ ಪೈಕಿ ಹಲವರಿಗೆ ನಮ್ಮ ಮಕ್ಕಳು ಮತ್ತು ಸ್ನೇಹಿತರ ಕಠಿಣ ಧೋರಣೆ, ಕಠೋರ ನಡವಳಿಕೆಗಳ ಕುರಿತು ನೋವಿರುತ್ತದೆ. ಆದರೆ ನಮ್ಮಲ್ಲಿ ಎಷ್ಟು ಜನ ಅಂತಹಾ ಸ್ನೇಹಿತರ ಅಥವಾ ಮಕ್ಕಳ ನಡವಳಿಕೆಗಳನ್ನು ತಿದ್ದುವ ಪ್ರಾಮಾಣಿಕ ಪ್ರಯತ್ನ ಮಾಡಿದವರು? ನಾವು ಆ ಪ್ರಯತ್ನವನ್ನು ಪ್ರಾರಂಭಿಸುವ ಮೊದಲು ಅವರ ಕುರಿತು ನಮ್ಮಲ್ಲಿರುವ ಕೀಳಭಿಪ್ರಾಯಗಳನ್ನು ತೊರೆಯಬೇಕಾಗಿದೆ. ಅವರೊಂದಿಗೆ ಗಂಟಿಕ್ಕಿದ ಮುಖದೊಂದಿಗೆ ವ್ಯವಹರಿಸದೆ ಮುಖದಲ್ಲಿ ಮುಗುಳ್ನಗುವಿನ ಚಿಹ್ನೆ ಪ್ರದರ್ಶಿಸಬೇಕಾಗಿದೆ. ಕೋಪ ತೊರೆಯಿರಿ. ಸಂಯಮದಿಂದ ವರ್ತಿಸಿರಿ. ಜಿಗುಟುತನ, ಜಿಪುಣತನ ಬಿಟ್ಟುಬಿಡಿ ವಿಶಾಲ ಹೃದಯವನ್ನು ಪ್ರದರ್ಶಿಸಿರಿ. ಇದೇನೂ ಪ್ರಯಾಸದ ಕಾರ್ಯಗಳಲ್ಲ. ಆದರೆ ಇದಕ್ಕೆ ಇಚ್ಛಾಶಕ್ತಿಯ ಅವಶ್ಯಕತೆ ಇದೆ.

ಇಸ್ಲಾಮಿನ ಅಂತ್ಯ ಪ್ರವಾದಿ ಮುಹಮ್ಮದ್(ಸ)ರವರ ಜೀವನ ಚರಿತ್ರೆಯನ್ನು ಅಧ್ಯಯನ ಮಾಡಿದರೆ ಅವರು ಜನರೊಂದಿಗೆ ಬೆರೆಯುತ್ತಿದ್ದರು ಮತ್ತು ಸಮೂಹದಲ್ಲಿ ಅತ್ಯುತ್ತಮ ಸ್ವಭಾವವನ್ನು ಪ್ರದರ್ಶಿಸುತ್ತಿದ್ದರು. ಅದೇ ಅಸಾಮಾನ್ಯ ಸ್ವಭಾವ ಮತ್ತು ವರ್ತನೆಗಳಿಂದ ಅವರು ಜನರ ಹೃದಯಗಳಲ್ಲಿ ಮನೆ ಮಾಡಿದರು. ಪ್ರವಾದಿ(ಸ)ರವರ ಈ ಉತ್ಕೃಷ್ಟ ಸ್ವಭಾವ ಕೃತಕವಾಗಿರಲಿಲ್ಲ ಮತ್ತು ಅವರು ಜನರ ಮುಂದೆ ಒಂದು ರೀತಿಯ ಆಕರ್ಷಕ ವೇಷ ತೊಟ್ಟು

ಅತ್ಯುತ್ತಮ ಸ್ವಭಾವ ಪ್ರದರ್ಶಿಸಿಕೊಂಡು ನಂತರ ಮನೆಗೆ ತಲುಪಿದ ತಕ್ಷಣ ವೇಷ ಕಳಚಿ ನೈಜ ರೂಪಧಾರಣೆ ಮಾಡಿಕೊಂಡು ದುಡುಕು, ಕೋಪ-ಅಸಹಿಷ್ಣುತೆಯನ್ನು ಪ್ರದರ್ಶಿಸುತ್ತಿದ್ದವರಲ್ಲ.

ಇಲ್ಲ! ಪ್ರವಾದಿ ವರ್ಯರ ಸ್ವಭಾವವು ಪ್ರಾಕೃತಿಕವಾಗಿತ್ತು. ಅದು ಅವರ ರಕ್ತದಲ್ಲೇ ಸೇರಿಕೊಂಡು ಪವಿತ್ರ ಅಭ್ಯಾಸವಾಗಿ ಮಾರ್ಪಟ್ಟಿತ್ತು. ಅವರು ಮುಖದಲ್ಲಿ ಪರರಿಗೆ ಮಂದಹಾಸವೂ ಮನೆಯವರಿಗೆ ಬಿಗುಮಾನವೂ ಇರುತ್ತಿರಲಿಲ್ಲ. ಅವರು ಪರರಿಗಷ್ಟೇ ಆದರ್ಶಪ್ರಾಯರಾಗಿದ್ದು ಮನೆಗೆ ಪ್ರವೇಶಿಸದಂತೆ ಮಡದಿ ಮಕ್ಕಳ ಮುಂದೆ ಕಟುಕನ ರೂಪ ತಾಳುತ್ತಿರಲಿಲ್ಲ. ಅವರು ಸದಾ ಉತ್ಕೃಷ್ಟ ಸ್ವಭಾವದ ವಕ್ತಾರರಾಗಿದ್ದರು. ಈ ಸ್ವಭಾವವನ್ನು ಅವರು ಅಲ್ಲಾಹನ ಆರಾಧನೆಗಳಿಂದ ರೂಪೀಕರಿಸಿಕೊಂಡಿದ್ದರು. ಪ್ರವಾದಿ(ಸ) ತನ್ನ ಮಂದಹಾಸದಿಂದ ಅಲ್ಲಾಹನ ಸಾಮಿಪ್ಯ ಗಿಟ್ಟಿಸಿಕೊಳ್ಳುವ ಅಭಿಲಾಶೆ ಇಟ್ಟುಕೊಂಡಿದ್ದರು. ಅವರು ಸಹನೆ, ವಿನಯ, ಕ್ಷಮಾಗುಣಗಳನ್ನು ಇಬಾದತ್ ಎಂಬಂತೆ ಅವಲಂಬಿಸಿಕೊಂಡಿದ್ದರು.

ಆದ್ದರಿಂದ ಯಾರೂ ಸದ್ವರ್ತನೆ ಮತ್ತು ಸುಸ್ವಭಾವವನ್ನು ಆರಾಧನೆ ಎಂದು ತಿಳಿದುಕೊಂಡು ಅಳವಡಿಸಿಕೊಳ್ಳುತ್ತಾರೊ ಅವರು ಸುಖ-ದುಃಖ, ಶಾಂತಿ ಮತ್ತು ಆತಂಕ, ಕೀರ್ತಿ ಮತ್ತು ಅಪಕೀರ್ತಿ, ಅಭಿಮಾನ-ಅಪಮಾನ, ರೋಗ ಮತ್ತು ಆರೋಗ್ಯ, ಲಾಭ ಮತ್ತು ನಷ್ಟದ ಸಮಯದಲ್ಲೆಲ್ಲಾ ಸದ್ವರ್ತನೆಯನ್ನಷ್ಟೇ ತೋರುತ್ತಾರೆ.

ಅದೆಷ್ಟೋ ಪತ್ನಿಯರು ತಮ್ಮ ಪತಿಯಂದಿರ ಪ್ರಾಮಾಣಿಕತೆ, ಸತ್ಯಸಂಧತೆ, ಸದ್ವರ್ತನೆ, ಸುಸ್ವಭಾವಗಳ ಕುರಿತು ಕತೆಗಳನ್ನು ಆಲಿಸುತ್ತಾರೆ. ಅವರ ವಿಶಾಲ ಹೃದಯ, ಹರ್ಷಚಿತ್ತ, ಹಸನ್ಮುಖಿ ಚಹರೆ, ಉತ್ಕೃಷ್ಟ ನಡವಳಿಕೆಗಳ ಕತೆ ಪರರ ನಾಲಿಗೆಗಳಲ್ಲಿ ಲಾಸ್ಯವಾಡುತ್ತಿರುತ್ತದೆ. ಆದರೆ ಪತ್ನಿಯರ ದೃಷ್ಟಿಗೆ ಅವರಲ್ಲಿ ಯಾವುದೇ ಸಮಾಧಾನಕರ ನಡವಳಿಕೆ ಕಾಣಲು ಸಿಗುವುದೇ ಇಲ್ಲ. ಆಕೆ ಕ್ಷಣ-ಕ್ಷಣವೂ ಅವನ ಒಂದು ಹಿತನುಡಿ, ಮಂದಹಾಸ, ಸದ್ವರ್ತನೆಗಾಗಿ ಹಪತಪಿಸುತ್ತಲೇ ಇರುತ್ತಾಳೆ. ಏಕೆಂದರೆ ಮನೆ ಪ್ರವೇಶಿಸುತ್ತಲೇ ಪತಿಯು ಅವಳೊಂದಿಗೆ ದುಡುಕುತನ, ಒರಟು ಸ್ವಭಾವ, ಅಮಾನವೀಯ ನಡವಳಿಕೆಗಳನ್ನು ಪ್ರಾರಂಭಿಸಿ ಬಿಡುತ್ತಾನೆ. ಮಾತು ಮಾತಿಗೂ ತಪ್ಪು ಹುಡುಕುತ್ತಾ ಸಿಡಿಯುತ್ತಿರುತ್ತಾನೆ. ಶಾಪ ಹಾಕುತ್ತಾ ಬೈಯ್ದಾಡುತ್ತಾ ಇರುತ್ತಾನೆ. ಅವಳ ಅವಶ್ಯಕತೆಗಳನ್ನು ಸರಿಯಾಗಿ ಪೂರೈಸದೆ ಜಿಪುಣತನದಿಂದ ವರ್ತಿಸುತ್ತಿರುತ್ತಾನೆ ಮತ್ತು ಹೊಟ್ಟೆ ಬಟ್ಟೆಗೆ ನೀಡುವ ಖರ್ಚಿನ ಕುರಿತೂ ಆಡಿಕೊಳ್ಳುತ್ತಾನೆ.

ಪ್ರವಾದಿ(ಸ) ಹೇಳಿದರು,

«خَيْرُكُمْ خَيْرُكُمْ لِأَهْلِهِ، وَأَنَا خَيْرُكُمْ لِأَهْلِي»

**“ನಿಮ್ಮ ಪೈಕಿ ನಿಮ್ಮ ಮನೆಯವರಿಗೆ ಅತ್ಯಂತ ಇಷ್ಟವಾದವರೇ ಎಲ್ಲರಿಗಿಂತ ಶ್ರೇಷ್ಠರಾಗಿದ್ದಾರೆ ನಾನು ನಮ್ಮ ಮನೆಯವರಿಗೆ ನಿಮ್ಮೆಲ್ಲರಿಗಿಂತ ಒಳ್ಳೆಯವನಾಗಿದ್ದೇನೆ’’ ಪ್ರವಾದಿ(ಸ) ತನ್ನ**

ಮಡದಿಯರೊಂದಿಗೆ ಹೇಗೆ ವರ್ತಿಸುತ್ತಿದ್ದರು. ಈ ಕುರಿತು ಅಸ್ವದ್ ಬಿನ್ ಯಝೀದ್(ರ) ಹೇಳುತ್ತಾರೆ, ನಾನು ಆಯಿಷಾ(ರ) ರೊಂದಿಗೆ ಕೇಳಿದೆ ಪ್ರವಾದಿ(ಸ) ತಮ್ಮ ಮನೆಯಲ್ಲಿ ಏನೇನು ಮಾಡುತ್ತಾರೆ? ಅವರು ಹೇಳಿದರು. ಅವರು(ಸ) ಮನೆ ಕೆಲಸಗಳಲ್ಲಿ ಮನೆಯವರಿಗೆ ನೆರವಾಗುತ್ತಾರೆ. ಹಾಗೆ ನಮಾಝಿನ ಸಮಯವಾಗಿ ಬಿಟ್ಟರೆ ವುಝೂ ನಿರ್ವಹಿಸಿ ನಮಾಝ್‌ಗಾಗಿ ಹೊರಟು ಹೋಗುತ್ತಿದ್ದರು.

ಸದಾ ಮಂದಹಾಸ ಬೀರುತ್ತಾ ಉತ್ತಮ ಸ್ವಭಾವವನ್ನು ಪ್ರಕಟಿಸುತ್ತಾ, ಕರುಣೆ ಮತ್ತು ಪ್ರೀತಿಯಿಂದ ವರ್ತಿಸುವ ಅದೆಷ್ಟೋ ಜನರ ಕುರಿತು ನಾವು ಕೇಳುತ್ತೇವೆ. ಆದರೆ, ತಮ್ಮ ತಂದೆ-ತಾಯಿ, ಮಡದಿ-ಮಕ್ಕಳೊಂದಿಗೆ ಅವರ ವರ್ತನೆ ಅಷ್ಟೊಂದು ತೃಪ್ತಿಕರವಾಗಿರುವುದಿಲ್ಲ. ವಾಸ್ತವದಲ್ಲಿ ಅವರೊಂದಿಗೆ ಸದ್ವರ್ತನೆ ತೋರಬೇಕಾಗಿದ್ದು ಅವರ ಕರ್ತವ್ಯವಾಗಿರುತ್ತದೆ. ಆದರೆ ಅವರೊಂದಿಗೆ ಅವರ ಸಂಬಂಧವೇ ಸರಿಯಾಗಿರುವುದಿಲ್ಲ!

ಹೌದು! ಮನುಷ್ಯರಲ್ಲಿ ಅತ್ಯುತ್ತಮರು ತಮ್ಮ ಹೆತ್ತವರು, ಪತ್ನಿ ಮಕ್ಕಳು ಮತ್ತು ಕೆಲಸದವರೊಂದಿಗೆ ಉತ್ತಮವಾಗಿ ವರ್ತಿಸುವವರಾಗಿರುತ್ತಾರೆ.

ಒಂದು ದಿನ ಮುಂಜಾನೆ ಅಬೀ ಲೈಲಾ(ರ ) ಪ್ರವಾದಿ(ಸ)ರೊಂದಿಗೆ ಕುಳಿತ್ತಿದ್ದರು. ಮನೆಯಿಂದ ಹಸನ್ ಅಥವಾ ಹುಸೈನ್‌ರಲ್ಲಿ ಒಬ್ಬರು ತಮ್ಮ ಪುಟಾಣಿ ಪಾದಗಳಿಂದ ಅಂಬೆಕಾಲಿಕ್ಕುತ ಪ್ರವಾದಿ(ಸ)ರವರ ಬಳಿ ಬಂದರು. ಪ್ರವಾದಿ(ಸ) ಅವರನ್ನು ಎತ್ತಿಕೊಂಡು ಹೊಟ್ಟೆಯ ಮೇಲೆ ಕೂರಿಸಿದರು. ಮಗು ಪ್ರವಾದಿ(ಸ)ರವರ ಹೊಟ್ಟೆಯ ಮೇಲೆ ಮೂತ್ರ ಹೊಯ್ಯಲು ಪ್ರಾರಂಭಿಸಿತು. ಅಬೂಲೈಲಾ(ರ) ಹೇಳುತ್ತಾರೆ, “ನಾನು ನೋಡುವಾಗ ಪ್ರವಾದಿ(ಸ)ರವರ ಹೊಟ್ಟೆಯ ಮೇಲೆ ಮಗುವಿನ ಮೂತ್ರ ಹರಿಯುತ್ತಿತ್ತು. ತಕ್ಷಣ ನಾನು ಮಗುವನ್ನು ಎತ್ತಿಕೊಳ್ಳಲು ಮುಂದಾದೆ. ಆದರೆ, ಪ್ರವಾದಿ(ಸ) ಹೇಳಿದರು, “ನನ್ನ ಮಗುವನ್ನು ಬಿಟ್ಟು ಬಿಡಿ, ಅದಕ್ಕೆ ತೊಂದರೆ ಕೊಡಬೇಡಿ.” ಮಗು ಸಂಪೂರ್ಣವಾಗಿ ಮೂತ್ರ ಮಾಡಿದ ನಂತರ ಅವರು(ಸ) ನೀರು ತರಿಸಿಕೊಂಡು ಮೂತ್ರದ ಮೇಲೆ ಹರಿಸಿ ಬಿಟ್ಟರು”

ಪ್ರವಾದಿ(ಸ)ರವರು ವಿನಯ ಮತ್ತು ಆದರ್ಶಪೂರ್ಣ ರೀತಿಯಲ್ಲಿ ಜೀವಿಸುವ ಕುರಿತು ತನ್ನ ದೇಹವನ್ನು ಸಿದ್ಧಗೊಳಿಸಿದ್ದರು. ಆದ್ದರಿಂದ ಹಿರಿಯರ-ಕಿರಿಯರ ಸರ್ವರ ಹೃದಯದಲ್ಲಿ ಅವರಿಗೆ ಅಚ್ಚಳಿಯದ ಸ್ಥಾನ ಪ್ರಾಪ್ತಿಯಾಗಿದೆ.

**ಉಪಸಂಹಾರ**

**“ಕತ್ತಲನ್ನು ದೂರುವ ಬದಲು ನಿಮ್ಮ ದೀಪವನ್ನು ಸರಿಪಡಿಸಿಕೊಳ್ಳಲು ಪ್ರಯತ್ನಿಸಿರಿ.”**

# ಬಡವರು ಮತ್ತು ದಾರಿದ್ರ್ಯವಂತರೊಂದಿಗೆ

ಇಂದಿನ ಜನರಲ್ಲಿ ಹೆಚ್ಚಿನವರ ವರ್ತನೆಯು ವ್ಯವಹಾರಿಕವಾಗಿರುವುದು ಕಂಡು ಬರುತ್ತದೆ. ಶ್ರೀಮಂತನು ಎಷ್ಟು ಕಠಿಣವಾದ ಹಾಸ್ಯಗವನವನ್ನು ವಾಚಿಸಿದರೂ ವೀಕ್ಷಕರು ಎದ್ದೂ ಬಿದ್ದು ನಗಾಡುತ್ತಾರೆ, ಮತ್ತು ಸಾಮಾನ್ಯವಾಗಿ ಅವನ ತಪ್ಪುಗಳನ್ನು ನಿಸ್ಸಾರವೆಂದು ತಿಳಿದು ಕಂಡೂ ಕಾಣದಂತೆ ಅಲಕ್ಷಿಸಲಾಗುತ್ತದೆ. ಇದಕ್ಕೆ ತದ್ವಿರುದ್ಧವಾಗಿ ಬಡವನು ಎಷ್ಟೊಂದು ಅರ್ಥವತ್ತಾದ ನೇರವಾಗಿ ವೀಕ್ಷಕರಿಗೆ ಅರ್ಥವಾಗುವಂತಹಾ ಕಾವ್ಯ ವಾಚನ ಮಾಡಿದರೂ ವೀಕ್ಷಕರು ನೆಗಾಡುವ ಬದಲಾಗಿ ಅದನ್ನು ಗೇಲಿ ಮಾಡುತ್ತಾರೆ, ಅವನಿಂದ ಆಕಸ್ಮಾತ್ ಏನಾದರೊಂದು ಪ್ರಮಾದ ಸಂಭವಿಸಿದರೆ ಜನರು ಅವನ ಮೆಲೆ ಸವಾರಿ ಮಾಡಿ ಬಿಡುತ್ತಾರೆ. ಅವನ ಕಣ್ಣಿನ ಕೋಮಲ ರೆಪ್ಪೆಗಳು ಕೂಡಾ ಅವರಿಗೆ ಭಯಾನಕವಾಗಿ ಕಾಣುವುದು.

ಈ ನೆಲೆಯಲ್ಲಿ ಅಲ್ಲಾಹನ ಸಂದೇಶವಾಹಕರಾದ ಮುಹಮ್ಮದ್(ಸ)ರವರ ವರ್ತನೆಯು ಅತ್ಯಂತ ಪ್ರಾಮಾಣಿಕವಾಗಿತ್ತು. ಅವರು ಶ್ರೀಮಂತ ಮತ್ತು ಬಡವರೆಲ್ಲರೊಂದಿಗೂ ಒಂದೇ ರೀತಿಯ ನಿಲುವನ್ನು ಹೊಂದಿರುತ್ತಿದ್ದರು.

ಅನಸ್(ರ) ತಿಳಿಸುವಂತೆ ಝಾಹಿರ್ ಬಿನ್ ಹರಾಮ್ ಎಂಬ ಹೆಸರಿನ ಮರುಭೂಮಿಯ ನಿವಾಸಿಯೊಬ್ಬರು ಯಾವುದಾದರೂ ಕೆಲಸದಲ್ಲಿ ಮದೀನಕ್ಕೆ ಬಂದಾಗಲೆಲ್ಲಾ ಪ್ರವಾದಿ(ಸ)ರವರಿಗೆ ಪನೀರ್ ಅಥವಾ ತುಪ್ಪವನ್ನು ಉಡುಗೊರೆಯಾಗಿ ತರುತ್ತಿದ್ದರು. ಅವರು ಮರಳುವಾಗ ಪ್ರವಾದಿ(ಸ)ರವರು ಕೂಡಾ ಅವರಿಗೆ ಖರ್ಜೂರ ಅಥವಾ ಮದೀನಾದ ಯಾವುದಾದರೂ ಧಾನ್ಯವನ್ನು ಉಡುಗೊರೆಯಾಗಿ ನೀಡುತ್ತಿದ್ದರು. ಪ್ರವಾದಿ(ಸ)ರವರಿಗೆ ಝಾಹಿರ್‌ರೊಂದಿಗೆ ಅತೀವ ಪ್ರೀತಿ ಇತ್ತು. ಅವರು ಹೇಳುತ್ತಿದ್ದರು,

ಝಾಹಿರ್ ನಮ್ಮ ಮರುಭೂಮಿಯ ಮಿತ್ರರಾಗಿದ್ದಾರೆ

ನಾವು ಅವರ ಪಟ್ಟಣದ ಸ್ನೇಹಿತರಾಗಿದ್ದೇವೆ.

ರಝಾಹಿರ್ ಕಟ್ಟುನಿಟ್ಟಿನ ಪ್ರಕೃತಿಯ ವ್ಯಕ್ತಿಯಾಗಿದ್ದರು. ಅವರು ಒಂದು ದಿನ ಮರುಭೂಮಿಯಿಂದ ಹೊರಟು ಪ್ರವಾದಿ(ಸ)ರನ್ನು ಭೇಟಿಯಾಗಲು ಅವರ ಮನೆಗೆ ಬಂದರು. ಪ್ರವಾದಿ(ಸ) ಮನೆಯಲ್ಲಿರಲಿಲ್ಲ. ಝಾಹಿರ್‌ರೊಂದಿಗೆ ವ್ಯಾಪಾರದ ಕೆಲವು ಸಾಮಾನುಗಳಿದ್ದವು. ಅದನ್ನು ಹಿಡಿದುಕೊಂಡು ಅವರು ಪಟ್ಟಣಕ್ಕೆ ಹೊರಟು ಹೋದರು.

ಪ್ರವಾದಿ(ಸ)ರಿಗೆ ಝಾಹಿರ್ ಬಂದಿರುವ ವಿಷಯ ತಿಳಿದು ಪಟ್ಟಣಕ್ಕೆ ಹೋಗಿ ಅವರನ್ನು ಅನ್ವೇಶಿಸ ತೊಡಗಿದರು. ಒಂದು ಕಡೆ ಅವರು ಝಾಹಿರ್‌ರನ್ನು ಕಂಡರು. ಅಲ್ಲಿ ಝಾಹಿರ್ ಬೆವರಿನಿಂದ ಒದ್ದೆಯಾಗಿ ನಿಂತು ತನ್ನ ಸಾಮಾನುಗಳನ್ನು ಮಾರಾಟ ಮಾಡುತ್ತಿದ್ದರು. ಅವರು

ಧರಿಸಿದ ಉಡುಪು ಮಾಲಿನ್ಯಗೊಂಡಿತ್ತು. ಮರಳುಗಾಡಿನ ಜನರಂತೆ ಅವರಲ್ಲಿ ಬೆವರಿನ ವಾಸನೆ ಬರುತ್ತಿದ್ದವು. ಪ್ರವಾದಿ(ಸ) ಅವರ ಬೆನ್ನ ಹಿಂದಿನಿಂದ ಅವರ ಸಮೀಪಕ್ಕೆ ಹೋಗಿ ತನ್ನ ಬಾಹುಗಳಿಂದ ಅವರನ್ನು ತಬ್ಬಿಕೊಂಡರು. ಝಾಹಿರ್ ಪ್ರವಾದಿ(ಸ)ರನ್ನು ನೋಡಲಾರದೆ ಗಾಭರಿಯಿಂದ “ಬಿಟ್ಟು ಬಿಡುನನ್ನನ್ನು... ಯಾರು ನೀನು?”ಎಂದು ಕಿರುಚಿದರು.

ಪ್ರವಾದಿ(ಸ) ಮೌನವಾಗಿದ್ದರು. ಝಾಹಿರ್ ಅವರ ಬಾಹು ಬಂಧನದಿಂದ ಮುಕ್ತರಾಗಲು ಹರ ಸಾಹಸ ಪಡುತ್ತಾ ಕಷ್ಟದಿಂದ ತಿರುಗಿ ನೋಡಿದಾಗ ಅವರು ಪ್ರವಾದಿ(ಸ)ರನ್ನು ಕಂಡರು. ಅಲ್ಲಿಗೆ ಅವರು ಶಾಂತರಾದರು ಗಾಬರಿಯಿಂದ ಹೊರ ಬಂದರು.

ಈಗ ಅವರು ಪ್ರವಾದಿ(ಸ)ರವರ ಎದೆಗೆ ತನ್ನ ಹೊಟ್ಟೆಯನ್ನು ಅಂಟಿಸ ತೊಡಗಿದರು. ಪ್ರವಾದಿ(ಸ)ಗಳು ಕೂಡಾ ಅವರೊಂದಿಗೆ ಸಂತೋಷವನ್ನು ಹಂಚಿಕೊಳ್ಳುತ್ತಾ ಸುತ್ತಮುತ್ತಲಿದ್ದ ಜನರನ್ನು ಕರೆದು ಜೋರಾಗಿ.

“ಈ ಗುಲಾಮನನ್ನು ಯಾರು ಖರೀದಿಸುತ್ತೀರಿ.. ಈ ಗುಲಾಮನನ್ನು ಯಾರು ಖರೀದಿಸುತ್ತೀರಿ.” ಎಂದು ಕೇಳ ತೊಡಗಿದರು.

ಝಾಹಿದ್‌ರ್ ಅವರ ಬೆಲೆ ಏನೆಂದು ಚೆನ್ನಾಗಿ ಅರಿತಿದ್ದರು. ಅವರು ಬಹಳ ವಿನಮ್ರತೆಯಿಂದ ಹೇಳಿದರು “ಅಲ್ಲಾಹನ ಸಂದೇಶವಾಹಕರೇ! ಅಲ್ಲಾಹನಾಣೆ! ನನ್ನನ್ನು ಮಾರಿದರೆ ನಿಮಗೇನೂ ಹೆಚ್ಚಿನ ಬೆಲೆ ದೊರಕದು”

ಅದನ್ನು ಕೇಳಿ ಅಲ್ಲಾಹನ ಪ್ರವಾದಿಗಳು(ಸ) ಹೇಳಿದರು, “ಆದರೆ ಅಲ್ಲಾಹನ ಬಳಿ ನಿಮ್ಮ ಬೆಲೆ ಏನೂ ಕಡಿಮೆ ಇಲ್ಲ.. ಅಲ್ಲಾಹನ ಬಳಿ ನಿಮಗೆ ಉತ್ತಮ ಬೆಲೆ ಇದೆ.” (ಮುಸ್ನದ್ ಅಹ್ಮದ್ 3/161)

ಪ್ರವಾದಿ(ಸ)ರವರ ಹೃದಯವು ಬಡವರ-ದರಿದ್ರರ ಕಡೆಗೆ ಸರಿದುಕೊಳ್ಳುತ್ತಲೇ ಇತ್ತು ಎಂಬ ವಿಷಯದಲ್ಲಿ ಆಶ್ಚರ್ಯಪಡುವಂತದ್ದೇನೂ ಇಲ್ಲ. ಇದಕ್ಕೆ ಕಾರಣವೇನೆಂದರೆ, ಬಡವರು ಅವರ ಮೇಲೆ ತೋರುತ್ತಿದ್ದಷ್ಟೇ ಸ್ನೇಹ ಮತ್ತು ಕಾಳಜಿಯನ್ನು ಅವರು ಬಡವರ ಮೇಲೂ ತೋರುತ್ತಿದ್ದರು.

ಹೆಚ್ಚಿನ ಬಡ-ಬಗ್ಗರಿಗೆ ಶ್ರೀಮಂತರೊಂದಿಗೆ ಅವರು ಅನ್ನ-ನೀರು ಕೊಡುವುದಕ್ಕೆ-ಖರ್ಚು ಮಾಡುವುದಕ್ಕೆ ಜಿಪುಣತನ ತೋರುತ್ತಾರೆಂಬ ಆಕ್ಷೇಪವೇನೂ ಇರುವುದಿಲ್ಲ ಬದಲಾಗಿ ಶ್ರೀಮಂತರು ನಮ್ಮೊಂದಿಗೆ ಮೃದುವಾಗಿ ನಡೆದುಕೊಳ್ಳುವುದಿಲ್ಲವೆಂದೂ ಸದ್ವರ್ತನೆಯನ್ನು ತೋರುವುದಿಲ್ಲವೆಂದೂ ದೂರುವುದು ಹೆಚ್ಚಾಗಿದೆ.

ನಿಮ್ಮ ಬಾಯಿಯಿಂದ ಒಂದು ಗೌರವದ ಮಾತು, ನಿಮ್ಮ ತುಟಿಯಂಚಿನಲ್ಲಿ ಅವರಿಗಾಗಿ ಒಂದು ನಸುನಗೆಯನ್ನು ಕಾಣಲು ಕಾತರಿಸುವ ಎಷ್ಟು ಬಡವರಿದ್ದಾರೆ ಆಲೋಚಿಸಿ ನೋಡಿರಿ.. ಅವರ ಆತ್ಮಾಭಿಮಾನಕ್ಕೆ ದಕ್ಕೆಯಾಗದ ರೀತಿಯಲ್ಲಿ ನೀವು ಅವರೊಂದಿಗೆ ಸದ್ವರ್ತನೆ ತೋರಿದರೆ

ಅವರು ರಾತ್ರಿಯ ಕಾರ್ಗತ್ತಲಲ್ಲಿ ನಿಮಗೆ ಅಲ್ಲಾಹನ ಕಾರುಣ್ಯ ಲಭಿಸಲೆಂದು ಕರವೆತ್ತಿ ಪ್ರಾರ್ಥಿಸುತ್ತಾರೆ.

ಬಡವರೆಂಬ ಕಾರಣಕ್ಕೆ ಅವರ ಉಡುಪಿನಲ್ಲಿ ಮಾಲಿನ್ಯವಿರುತ್ತದೆಂದುಕೊಂಡು. ಅವರ ದೇಹದಲ್ಲಿ ದುರ್ಗಂಧ ಹರಡುತ್ತದೆಂದು, ಅವರು ಕಾಲಿಗೆ ಚಪ್ಪಲಿ ತೊಟ್ಟಿಲ್ಲವೆಂದುಕೊಂಡು ಮನೆಯ ಬಾಗಿಲಿನಿಂದಲೇ ಹೊರಗಟ್ಟಲ್ಪಡುವ ಅದೆಷ್ಟು ಅಭಾಗ್ಯವಂತರಿದ್ದಾರೆ. ಅವರಿಗೆ ಎಲ್ಲೂ ಸಾಕು ನಾಯಿಗೆ ಲಭಿಸುವಷ್ಟೂ ಪ್ರಾಮುಖ್ಯತೆ ದೊರಕುವುದಿಲ್ಲ. ಆದರೆ ಅವರೇನಾದರೂ ಅಲ್ಲಾಹನ ಮೇಲೆ ಪ್ರಮಾಣ ಮಾಡಿಬಿಟ್ಟರೆ ಅಲ್ಲಾಹು ಅವರ ಪ್ರಾರ್ಥನೆಗೆ ಪ್ರಾಮುಖ್ಯತೆ ಕಲ್ಪಿಸುತ್ತಾನೆ.

**ಸಾರಾಂಶ : “ಬಡವ - ದರಿದ್ರನೆಡೆಗೆ ನೀವು ಬೀರುವ ಮಂದಹಾಸವು ಅಲ್ಲಾಹನ ಬಳಿ ನಿಮ್ಮ ಸ್ಥಾನ-ಮಾನವನ್ನು ಹೆಚ್ಚಿಸಲೂ ಬಹುದು”**



# ಮಹಿಳೆಯರು

ಹಿಂದಿನ ಕಾಲದ ಜನರ ಒಂದು ಮಾತಿದೆ. ಹೆಣ್ಣಿನ ಭಾವನೆ, ಪ್ರೀತಿ ಮತ್ತು ಅಭಿಲಾಷೆಗಳನ್ನು ಪುರುಷರು ಅರ್ಥೈಸಿಕೊಳ್ಳದೆ ಹೋದಾಗ ಅವಳ ಮನದಾಳದಲ್ಲಿ ಅಸುರಕ್ಷಿತ ಭಾವನೆ ಮೊಳಕೆಯೊಡೆಯುತ್ತದೆ. ಒಳಗಿಂದೊಳಗೆ ಅವಳು ಕುದಿಯಲಾರಂಭಿಸುತ್ತಾಳೆ. ಹೇಗಾದರು ಈ ಗಂಡಾಂತರದಿಂದ ಮುಕ್ತಿ ಪಡೆದು ನನ್ನ ಭಾವನೆ ಮತ್ತು ಅಪೇಕ್ಷೆಗಳಿಗೆ ಬೆಲೆ ಲಭಿಸುವಂತಹಾ ಒಂದು ಆಶ್ರಯಧಾಮ ಲಭಿಸಲೆಂದು ಹಾತೊರೆಯುತ್ತಿರುತ್ತಾಳೆ. ಅಲ್ಲಾಹನು ಪುರುಷನನ್ನು ದೈಹಿಕವಾಗಿ ಸುದೃಢಗೊಳಿಸಿದ್ದರೆ ಸ್ತ್ರೀಯರಿಗೆ ಭಾವನಾತ್ಮಕವಾಗಿ ಬಲ ಒದಗಿಸಿದ್ದಾನೆ. ಅವಳ ಭಾವನೆ ಮತ್ತು ಸಹನೆಯ ಕಟ್ಟೆಯೊಡೆದರೆ ಎಂತಹಾ ಧೈರ್ಯ ಮತ್ತು ಸಾಮರ್ಥ್ಯ ವಂತರೂ ಅವಳ ಮುಂದೆ ಜಯಿಸಲಾರರು.

ಪತ್ನಿಯೊಂದಿಗೆ ಸಹ ಜೀವನವನ್ನು ಸುಖ ಮತ್ತು ಸಂತೋಷಕರಗೊಳಿಸಬೇಕೆಂದರೆ ನೀವು ಅವಳ ಹೃದಯ ಕವಾಟವನ್ನು ತೆರೆದು ಒಳ ಪ್ರವೇಶಿಸ ಬಲ್ಲಂತಹಾ ಕೀಲಿಯನ್ನು ವಶಪಡಿಸಿಕೊಳ್ಳಲೇಬೇಕು. ಈ "ಕೀಲಿ(ಚಾಬಿ) ಯ ಹೆಸರಾಗಿದೆ "ಭಾವನೆ" ಇದು ಸ್ತ್ರೀಯರ ಆಯುಧವಾಗಿದೆ. ಪತ್ನಿಯನ್ನು ಒಲಿಸಿಕೊಳ್ಳಲು ಅವಶ್ಯವಾಗಿ ನೀವು ಭಾವನಾತ್ಮಕವಾಗಿಯೇ ಅವಳನ್ನು ಎದುರಿಸಬೇಕಾಗಿದೆ.

ಪ್ರವಾದಿ ಪುಂಗವ(ಸ)ರು ನಮಗೆ ಸ್ತ್ರೀಯರೊಂದಿಗೆ ಸದ್ವರ್ತನೆ ತೋರಲು, ಅವಳ ಭಾವನೆಗಳಿಗೆ ಸ್ಪಂಧಿಸಲು ಉಪದೇಶಿಸಿರುವರು. ನೆಬಿ ವರ್ಯರು (ಸ) ತಂದೆಯಾದವನು ತನ್ನ ಹೆಣ್ಮಕ್ಕಳೊಂದಿಗೆ ಮೃದುವಾಗಿ ಕರುಣಾಳುವಾಗಿ ಪ್ರೀತಿ-ವಾತ್ಸಲ್ಯದಿಂದ ವರ್ತಿಸಬೇಕೆಂದು ಆದೇಶಿಸಿದ್ದಾರೆ.

«مَنْ عَالَ جَارِيَتَيْنِ حَتَّى تَبْلُغَا،
جَاءَ يَوْمَ الْقِيَامَةِ أَنَا وَهُوَ وَضَمَّ أَصَابِعَهُ»

**"ತನ್ನ ಎರಡು ಹೆಣ್ಮಕ್ಕಳು ಬೆಳೆದು ದೊಡ್ಡವರಾಗುವ ತನಕ ಅವರನ್ನು ಸಾಕಿ ಸಲಹಿದ ತಂದೆ ಮತ್ತು ನಾನು ಅಂತಿಮ ದಿನದಲ್ಲಿ ಈ ರೀತಿ ಒಂದಾಗಿರುವೆವು"** ಇದನ್ನು ಹೇಳಿ ಅವರು (ಸ) ತನ್ನೆರಡು ಬೆರಳನ್ನು ಎತ್ತಿ ತೋರಿಸಿದರು. ❶

ಪ್ರವಾದಿ (ಸ) ರವರು ಮಕ್ಕಳು ತಮ್ಮ ತಾಯಿಯೊಂದಿಗೆ ಅತ್ಯುತ್ತಮವಾದ ವರ್ತನೆಯನ್ನು ತೋರಬೇಕೆಂದು ತಾಕೀತು ಮಾಡಿರುವರು.

ಒಬ್ಬ ವ್ಯಕ್ತಿ ಪ್ರವಾದಿ (ಸ)ರವರ ಬಳಿ ಬಂದು ಕೇಳಿದರು"ನನ್ನ ಸದ್ವರ್ತನೆಗೆ ಅತ್ಯಂತ ಅರ್ಹಪಟ್ಟವರು ಯಾರು ಪ್ರವಾದಿಗಳೇ...?"

ಪ್ರವಾದಿ (ಸ) ಹೇಳಿದರು, ನಿನ್ನ ತಾಯಿ.... ನಿನ್ನ ತಾಯಿ... ನಿನ್ನ ತಾಯಿ ಮತ್ತೆ ನಿನ್ನ ತಂದೆ...❷

ಪ್ರವಾದಿ ಶ್ರೇಷ್ಠರು ಪತಿಯಂದಿರು ತಮ್ಮ ಪತ್ನಿಯೊಂದಿಗೆ ಅತ್ಯಂತ ಉತ್ತಮ ರೀತಿಯಲ್ಲಿ ವರ್ತಿಸಬೇಕೆಂದು ಸಾರಿದ್ದಾರೆ. ಸಣ್ಣ ಸಣ್ಣ ವಿಷಯಗಳಿಗೆ ಪತ್ನಿಯನ್ನು ಆಕ್ಷೇಪಿಸುವ ಪುರುಷರನ್ನು ಅವರು ತರಾಟೆಗೆ ತೆಗೆದುಕೊಳ್ಳುತ್ತಾರೆ. ಮತ್ತು ಪತ್ನಿಯರೊಂದಿಗೆ ಕೋಪ-ತಾಪಗಳೊಂದಿಗೆ ವರ್ತಿಸುವುದನ್ನು ಅವರು ಕಠಿಣವಾಗಿ ವಿರೋಧಿಸುತ್ತಾರೆ.

ಪ್ರವಾದಿ (ಸ) ಹಜ್ಜತುಲ್ ವಿದಾಅನ ಸಂದರ್ಭದಲ್ಲಿ ನಿಂತಿದ್ದರು. ಅವರ ಸುತ್ತಮುತ್ತಲೂ ಒಂದು ಲಕ್ಷದಷ್ಟು ಅನುಯಾಯಿಗಳು ಸೇರಿಕೊಂಡಿದ್ದರು. ಅವರಲ್ಲಿ ಕರಿಯರಿದ್ದರು, ಬಿಳಿಯರಿದ್ದರು. ಸಣ್ಣವರಿದ್ದರು, ದೊಡ್ಡವರಿದ್ದರು. ಶ್ರೀಮಂತರಿದ್ದರು, ಬಡವರಿದ್ದರು. ಅವರೆಲ್ಲರನ್ನೂ ಅಭಿ ಸಂಭೋಧಿಸುತ್ತಾ ಅವರು ಹೇಳಿದರು,

«أَلَا وَاسْتَوْصُوا بِالنِّسَاءِ خَيْراً، أَلَا وَاسْتَوْصُوا بِالنِّسَاءِ خَيْراً»

**"ಕೇಳಿರಿ! ಸ್ತ್ರೀಯರ ಕುರಿತು ನೀವು ಉತ್ತಮ ಮನೋಭಾವ ತೋರಬೇಕೆಂದು ನಾನು ವಸಿಯ್ಯತ್ ಮಾಡುತ್ತೇನೆ... ಕೇಳಿರಿ! ಸ್ತ್ರೀಯರ ಕುರಿತು ನೀವು ಉತ್ತಮ ಮನೋಭಾವ ತೋರಬೇಕೆಂದು ನಾನು ಉಪದೇಶಿಸುತ್ತೇನೆ"** ❸

ಒಂದು ದಿನ ಮದೀನಾದ ಸ್ತ್ರೀಯರು ಪ್ರವಾದಿ ವರ್ಯ(ಸ)ರ ಪತ್ನಿಯರೊಂದಿಗೆ (ರ) ತಮ್ಮ ಗಂಡಂದಿರ ಕುರಿತು ದೂರು ನೀಡಿದರು. ಪ್ರವಾದಿ (ಸ)ರವರಿಗೆ ಈ ವಿಷಯ ತಿಳಿದು ಬಂದಾಗ ಅವರು ಮಿಂಬರ್‌ನಲ್ಲಿ ಏರಿನಿಂತುಕೊಂಡರು. ಜನರನ್ನುದ್ದೇಶಿಸಿ ಹೇಳಿದರು,

"ನನ್ನ ಬಳಿ ಬಹಳಷ್ಟು ಸ್ತ್ರೀಯರು ತಮ್ಮ ಗಂಡಂದಿರ ಕುರಿತು ದೂರು ತಂದಿದ್ದಾರೆ. ಈ ಜನರು (ಯಾರ ಕುರಿತು ದೂರಲಾಗಿದೆಯೋ ಅವರು)ಒಳ್ಳೆಯವರಲ್ಲ"❹

ಅವರು ಮುಂದುವರಿಸುತ್ತಾ ಹೇಳಿದರು;

«خَيْرُكُمْ خَيْرُكُمْ لِأَهْلِهِ وَأَنَا خَيْرُكُمْ لِأَهْلِي»

**"ನಿಮ್ಮ ಮನೆಯವರ ಇಷ್ಟಕ್ಕೆ ಪಾತ್ರರಾದವರೇ ನಿಮ್ಮ ಪೈಕಿ ಅತ್ಯುತ್ತಮರು. ನಾನು ನಿಮ್ಮೆಲ್ಲರಿಗಿಂತ ನನ್ನ ಮನೆಯವರ ಇಷ್ಟಕ್ಕೆ ಪಾತ್ರನಾದವನಾಗಿದ್ದೇನೆ."** ❺

ಇಸ್ಲಾಮ್ ಧರ್ಮವು ಸ್ತ್ರೀಯರಿಗೆ ಬಹಳ ಉನ್ನತ ಸ್ಥಾನಮಾನವನ್ನು ನೀಡಿದೆ. ಅವರ ಆತ್ಮ ಗೌರವ ಮತ್ತು ಆತ್ಮಾಭಿಮಾನವನ್ನು ಅದು ಅಂಗೀಕರಿಸಿಕೊಂಡು ಅತ್ಯಂತ ಗೌರವ ಪೂರ್ವಕವಾಗಿ ಅವರೊಂದಿಗೆ ವರ್ತಿಸಬೇಕೆಂದು ಸಾರುತ್ತದೆ. ಸ್ತ್ರೀಯ ಮಾನ ರಕ್ಷಣೆಯ ನಿಟ್ಟಿನಲ್ಲಿ ಇಸ್ಲಾಮ್‌ನಲ್ಲಿ ಯುದ್ಧ ನಡೆದಿದೆ. ರಕ್ತದ ಕೋಡಿ ಹರಿದಿದೆ.

ಮದೀನಾದಲ್ಲಿ ಯಹೂದಿಯರು ಮುಸ್ಲಿಮರೊಂದಿಗೆ ವಾಸವಾಗಿದ್ದರು. ಮುಸ್ಲಿಮ್ ಸ್ತ್ರೀಯರು ಮುಖ ಮುಚ್ಚಿಕೊಂಡು ಪರ್ದಾ ಧರಿಸುತ್ತಾ ನಡೆದಾಡುವುದು ಅವರಿಗೆ ಅಪ್ರಿಯ ಸಂಗತಿಯಾಗಿತ್ತು. ಅವರು ನಿರಂತರ ಮುಸ್ಲಿಮ್ ಸ್ತ್ರೀ ಸಮೂಹದಲ್ಲಿ ಪರ್ಧಾದ ವ್ಯವಸ್ಥೆಯನ್ನು ಬುಡಮೇಲು ಗೊಳಿಸುವ ಷಡ್ಯಂತ ರೂಪಿಸುತ್ತಿದ್ದರು. ಆದರೆ ಆ ಪ್ರಯತ್ನದಲ್ಲಿ ಅವರು ಪದೇ ವಿಫಲರಾಗುತ್ತಲೇ ಇದ್ದರು.

ಒಂದು ದಿನ ಮುಸ್ಲಿಮ್ ಸ್ತ್ರೀಯೊಬ್ಬಳು ಯಹೂದಿಯರಲ್ಲಿ ಬನೂಕೈನುಕಾ ಗೋತ್ರಸ್ಥರು ನೆಲೆಸಿದ್ದ ಪೇಟೆಯಲ್ಲಿ ಏನೋ ಖರೀದಿಸಲು ಬಂದಿದ್ದಳು. ಅವಳು ಸಂಪೂರ್ಣ ಪರ್ಧಾ ಧರಿಸಿದ ಮರ್ಯಾದಸ್ಥಳೇ ಆಗಿದ್ದಳು. ಅಲ್ಲಿ ಅವಳು ಚಿನ್ನಾಭರಣಗಳನ್ನು ಮಾಡುವ ಯಹೂದಿಯೊಬ್ಬನ ಬಳಿಗೆ ಹೋಗಿ ಅವನ ಅಂಗಡಿಯಲ್ಲಿ ಕುಳಿತುಕೊಂಡಳು. ಯಹೂದ ಅವಳ ಪಾವಿತ್ರತೆ ಮತ್ತು ಪರಿಪೂರ್ಣ ಪರ್ದಾವನ್ನು ಕಂಡು ಕೆಂಡವಾಗಿ ಬಿಟ್ಟನು. ಅವನು ಅಜ್ಞಾನ ಕಾಲದ ಮಹಿಳೆಯಂತೆ ಇವಳನ್ನೂ ಮುಕ್ತವಾಗಿ ಕಂಡು ಪುಳಕಗೊಳ್ಳ ಬಯಸುತ್ತಿದ್ದನು. ಇಸ್ಲಾಮಿಗಿಂತ ಮೊದಲು ಅಲ್ಲಿ ಅದು ಸರ್ವ ಸಾಮಾನ್ಯವೇ ಆಗಿತ್ತು.

ಯಹೂದಿ ಆ ಮಹಿಳೆಯನ್ನು ಹಿಜಾಬ್‌ನಿಂದ ಸರಿಸಲು ಅವಳ ಮುಖವನ್ನು ನೋಡಲು ಶತ ಪ್ರಯತ್ನ ನಡೆಸತೊಡಗಿದ. ಆದರೆ ಅವಳು ಅವನನ್ನು ಲೆಕ್ಕಿಸಲೇ ಇಲ್ಲ. ಕಡೆಗೆ ಆ ದುಷ್ಟನೊಂದು ತಂತ್ರ ಹೆಣೆದನು. ಸಮಯ ಸಾಧಿಸಿ ಅವಳ ಹಿಂದಿನಿಂದ ಹೋಗಿ ಅವಳ ಖಮೀಸ್‌ನ ಒಂದು ತುದಿಯನ್ನು ಸೊಂಟದಲ್ಲಿ ನೇತಾಡುತ್ತಿದ್ದ ದುಪ್ಪಟ್ಟದ ಸೆರಗಿಗೆ ಕಟ್ಟಿಬಿಟ್ಟ. ಆ ಮಹಿಳೆ ಕುಳಿತಲ್ಲಿಂದ ಎದ್ದು ನಿಂತಾಗ ಹಿಂದಿನಿಂದ ಅವಳ ಖಮೀಸ್‌ನ ತುದಿ ಮೇಲಕ್ಕೆತ್ತಲ್ಪಟ್ಟಿತು. ಮತ್ತು ಪರ್ಧಾ ತೆರವುಗೊಂಡಿತು. ಸುತ್ತಮುತ್ತಲಿನ ಯಹೂದಿಗಳು ಕೇಕೆ ಹೊಡೆದು ನಕ್ಕರು. ನಾಚಿಕೆ ಮತ್ತು ಗಾಬರಿಯಿಂದ ಸಿಡಿಲು ಬಡಿದಂತಾಗಿ ಆ ಮಹಿಳೆಯು ಚೀರುತ್ತಾ ಹೇಳಿತು.... "ನೀನು ನನ್ನನ್ನು ಕೊಂದಿದ್ದರೂ ಪರವಾಗಿರಲಿಲ್ಲ. ನನ್ನನ್ನು ಈ ರೀತಿ ಅಪಮಾನಗೊಳಿಸಬಾರದಿತ್ತು" ಎನ್ನುತ್ತಾ ಗೋಗೆರೆದು ಅಳ ತೊಡಗಿತು. ಒಬ್ಬ ಮುಸಲ್ಮಾನನು ಅಲ್ಲಿ ಸಮೀಪದಲ್ಲಿ ಇದನ್ನು ನೋಡುತ್ತಿದ್ದ. ಅವನ ರಕ್ತ ಕುದಿಯಿತು. ತಕ್ಷಣ ಖಡ್ಗವನ್ನು ಕೈಗೆತ್ತಿಕೊಂಡು ಯಹೂದಿಯ ಮೇಲೇರಿ ಬಿಟ್ಟನು. ಮತ್ತು ಒಂದೇ ಏಟಿಗೆ ಕೊಂದು ಹಾಕಿದನು. ಯಹೂದಿಗಳು ಒಂದಾಗಿ ಆ ಮುಸ್ಲಿಮ್ ತರುಣನನ್ನೂ ರಕ್ತಸಾಕ್ಷಿಯಾಗಿ ಮಾಡಿದರು.

ಪ್ರವಾದಿ (ಸ)ರವರಿಗೆ ಘಟನೆಯ ಸುದ್ದಿ ತಲುಪಿತು. ಯಹೂದಿಗಳು ಒಪ್ಪಂದವನ್ನು ಮುರಿದರೆಂದು ಹೇಳಲಾಯಿತು. ಮುಸ್ಲಿಮ್ ಮಹಿಳೆಯನ್ನು ಅವರು ಅಪಮಾನಿಸಿದರೆಂದು ದೂರಲಾಯಿತು. ಪ್ರವಾದಿ(ಸ) ತನ್ನ ಸೈನಿಕರೊಂದಿಗೆ ಆ ಪೇಟೆಯನ್ನು ಸುತ್ತು ವರಿದರು. ಯಹೂದಿಗಳು ತಮ್ಮ ತೀರ್ಮಾಣವನ್ನು ಒಪ್ಪಿಕೊಳ್ಳುವ ತನಕ ಪ್ರವಾದಿಗಳು(ಸ) ಅಲ್ಲಿಂದ ಕದಲಲಿಲ್ಲ.

ಪ್ರವಾದಿ (ಸ) ಮುಸ್ಲಿಮರನ್ನು ಕೆಣಕಿದ, ಪರಿಶುದ್ಧರಾದ ಮುಸ್ಲಿಮ್ ಸ್ತ್ರೀಯರ ಪಾವಿತ್ರ್ಯತೆಗೆ ಭಂಗ ತಂದ ಯಹೋದರ ಕೂಟಕ್ಕೆ ಅತ್ಯಂತ ಯಾತನಾಮಯ ಶಿಕ್ಷೆ ನೀಡಬೇಕೆಂದು ಬಯಸಿದ್ದರು. ಏಕೆಂದರೆ ಇಸ್ಲಾಮ್ ಸ್ತ್ರೀಯರಿಗೆ ಎಷ್ಟೊಂದು ಮಹತ್ವವನ್ನು ಕಲ್ಪಿಸುತ್ತದೆನ್ನುವುದನ್ನು ಅವರಿಗೆ ಮನದಟ್ಟು ಮಾಡಿಕೊಡ ಬಯಸಿದ್ದರು. ಅವರು ತನ್ನ ಇರಾದೆಯನ್ನು ಕಾರ್ಯರೂಪಕ್ಕೆ ತರಲು ಮುಂದಾದಾಗ ಶೈತಾನನ ಸೈನ್ಯದ ಒಬ್ಬ ಸಿಪಾಯಿ, ಅವನಿಗೆ ಸ್ತ್ರೀಯರ ಮಹತ್ವವಾಗಲಿ, ಮರ್ಯಾದೆಯಾಗಲಿ ತಿಳಿದಿಲ್ಲ. ಇಸ್ಲಾಮಿನ ಮೇಳ್ಮೆಯಾಗಲೀ ಶ್ರೇಷ್ಟತೆಯ ಜ್ಞಾನವು ಅವನಿಗಿಲ್ಲ. ಸ್ವಾರ್ಥ, ಸ್ಥಾನ ಮಾನ ಸ್ಮಹಿತಾಸಕ್ತಿಯ ದೃಷ್ಟಿಕೋನ ಉಳ್ಳವನಾಗಿದ್ದ ಅವನು ಮುಸ್ಲಿಮರೊಳಗೇ ಅವಿತುಕೊಂಡಿದ್ದ ಇಸ್ಲಾಮಿನ ಶತ್ರುವೂ ಆಗಿದ್ದ. "ಮುನಾಫಿಕರ ನಾಯಕ ಅಬ್ದುಲ್ಲಾಬಿನ್ ಉಬೈ ಬಿನ್ ಸಲೂಲ್ ಪ್ರವಾದಿ (ಸ)ರವರ ಮುಂದೆ ನಿಂತು ಹೇಳಿದ "ಹೇ ಮುಹಮ್ಮದ್ (ಸ)! ನನ್ನ

ಹಿತಚಿಂತಕರು ಮತ್ತು ಸಹವರ್ತಿಗಳೊಂದಿಗೆ ಉತ್ತಮವಾಗಿ ವರ್ತಿಸಿರಿ."

ಆ ಜನರು ಅಜ್ಞಾನ ಕಾಲದಲ್ಲಿ ಅಬ್ದುಲ್ಲಾ ಬಿನ್ ಉಬೈಯ ಅನುಯಾಯಿಗಳಾಗಿದ್ದರು. ಪ್ರವಾದಿ(ಸ) ಅವನ ಕಡೆಯಿಂದ ಮುಖ ತಿರುಗಿಸಿ ಬಿಟ್ಟರು. ಅವನ ಯಾವುದೇ ಮಾತನ್ನು ಆಲಿಸಲು ಅವರು ಇಷ್ಟ ಪಡಲಿಲ್ಲ. ಏಕೆಂದರೆ ಅವನು ಯಹೂದರ ಸಮರ್ಥಕನಾಗಿದ್ದ ಮತ್ತು ಒಳಗಿಂದೊಳಗೆ ಮುಸ್ಲಿಮರನ್ನು ವಿರೋಧಿಸುತ್ತಿದ್ದ.

ಮುನಾಫಿಕರ ಸರದಾರ ಮತ್ತೆ ಎದ್ದು ಮುಂದೆ ಬಂದು ಹೇಳಿದನು. "ಹೇ ಮುಹಮ್ಮದ್(ಸ)! ಯಹೂದರೊಂದಿಗೆ ಸದ್ವರ್ತನೆ ತೋರಿರಿ" ಪ್ರವಾದಿ (ಸ) ಮುಸ್ಲಿಮ್ ಮಹಿಳೆಯನ್ನು ಅಪಮಾನ ಗೊಳಿಸಲಾದ ಕುರಿತು ಅತ್ಯಂತ ಕೋಪಗೊಂಡಿದ್ದರು. ಆದ್ದರಿಂದ ಈ ಸಲವೂ ಅವರು ಅವನಿಂದ ಮುಖ ತಿರುಗಿಸಿಕೊಂಡರು. ಇದರಿಂದ ಮುನಾಫಿಕರು ಕ್ರೋಧಗೊಂಡರು. ಅವರ ನೀಚ ನಾಯಕನು ಉನ್ಮತ್ತನಾದವನಂತೆ ಏರಿಬಂದು ಪ್ರವಾದಿ (ಸ) ರವರ ಕೊರಳ ಪಟ್ಟಿ ಹಿಡಿದು ತನ್ನತ್ತ ಎಳೆದುಕೊಳ್ಳುತ್ತಾ ಹೇಳಿದ "ನನ್ನ ಹಿತ ಚಿಂತಕರೊಂದಿಗೆ ಉತ್ತಮವಾಗಿ ವರ್ತಿಸಿರಿ... ನನ್ನ ಸಹವರ್ತಿಗಳೊಂದಿಗೆ ಸದ್ವರ್ತನೆ ತೋರಿರಿ" ಪ್ರವಾದಿ (ಸ) ಈಗ ತುಂಬಾ ಕೋಪಗೊಂಡರು. ಅವನ ಕಡೆ ತಿರುಗಿ ನೋಡಿ ಗಟ್ಟಿ ಸ್ವರದಲ್ಲಿ ಹೇಳಿದರು "ನನ್ನನ್ನು ಬಿಟ್ಟುಬಿಡು"

ಮುನಾಫಿಕ್ ಒಪ್ಪಲಿಲ್ಲ.ಅವನು ಪ್ರವಾದಿ (ಸ)ರೊಂದಿಗೆ ಆಣೆ ಹಾಕುತ್ತಾ... ಪ್ರಮಾಣ ಮಾಡುತ್ತಾ... "ಯಹೂದರನ್ನು ಹತ್ಯೆಗೈಯ್ಯುವ ಆದೇಶವನ್ನು ತಾವು ಹಿಂದೆ ಪಡೆಯಬೇಕು" ಎಂದು ಒತ್ತಾಯಿಸಿದನು. ಕಡೆಗೆ ಪ್ರವಾದಿ(ಸ) ಅವನ ಕಡೆ ನೋಡಿ ಹೇಳಿದರು" ನಡಿ... ಅವರು ನಿನ್ನವರು"❻

ಪ್ರವಾದಿ(ಸ) ಯಹೂದರನ್ನು ಹತ್ಯೆಗೈಯ್ಯುವ ನಿರ್ಧಾರ ಹಿಂದೆ ಪಡೆದರೂ ಅವರನ್ನು ಮದೀನಾದಿಂದ ಗಡೀಪಾರುಗೊಳಿಸಿದರು. ಹೌದು! ಇಸ್ಲಾಮ್ ಸ್ತ್ರೀಯರ ಆತ್ಮಾಭಿಮಾನಕ್ಕೆ ಎಷ್ಟೊಂದು ಬೆಲೆ ಕಲ್ಪಿಸುತ್ತದೆನ್ನುವುದು ಇದರಿಂದ ತಿಳಿದುಬರುತ್ತದೆ.

ಇನ್ನೊಂದು ಘಟನೆ ನೋಡಿ...

ಸಅಲಬರ ಪುತ್ರಿ ಖೌಲರವರು ಶ್ರೇಷ್ಠ ಸಹಾಬ ವನಿತೆಯರಲ್ಲಿ ಸೇರಿದವರಾಗಿದ್ದಾರೆ. ಇವರ ಪತಿ ಔಸ್‌ಬಿನ್ ಸಾಮಿತ್ (ರ) ವೃದ್ಧರಾಗಿದ್ದರು. ಅವರು ಮಾತು ಮಾತಿಗೆ ಕೋಪಗೊಳ್ಳುತ್ತಿದ್ದರು. ಒಂದು ದಿನ ಅವರೊಂದು ಸಭೆಯಿಂದ ಮರಳಿ ಮನೆಗೆ ಬಂದಾಗ ಪತ್ನಿಯೊಂದಿಗೆ ಯಾವುದೋ ವಿಷಯಕ್ಕೆ ಸಂಬಂಧಿಸಿ ಮಾತಿಗೆ ಮಾತು ಬೆಳೆದು ಕೋಪಾವಿಷ್ಠರಾಗಿ "ನೀನು ನನಗೆ ತಾಯಿಗೆ ಸಮಾನ" ಎಂದು ಹೇಳಿಬಿಟ್ಟರು. ಅಜ್ಞಾನ ಕಾಲದಲ್ಲಿ ಈ ಮಾತಿಗೆ ನಾನು ನಿನಗೆ ತಲಾಖ್ ಹೇಳಿದೆ ಎಂಬ ಅರ್ಥವನ್ನು ಕಲ್ಪಿಸಿಕೊಳ್ಳಲಾಗುತ್ತಿತ್ತು. ಖೌಲ(ರ)ರಿಗೆ ಇಸ್ಲಾಮಿನಲ್ಲಿ ಈ ಮಾತಿಗೆ ಏನು ಅರ್ಥ ಕಲ್ಪಿಸಲಾಗುತ್ತದೆ ಎಂದು ತಿಳಿದಿರಲಿಲ್ಲ. ಔಸ್(ರ) ಕೋಪದಿಂದ ಮುಕ್ತರಾಗಿ ಮನೆಗೆ ಮರಳಿ ಬಂದು ಪತ್ನಿಯನ್ನು ಸಮೀಪಿಸುವಾಗ ಪತ್ನಿಯು ದೂರ ಸರಿದರು ಮತ್ತು ಹೇಳಿದರು " ಖೌಲಳ ಜೀವ ಯಾರ ಹಿಡಿತದಲ್ಲಿದೆಯೋ ಅವನ ಮೇಲಾಣೆ! ನೀವು ಹೇಳುವುದು ಹೇಳಿ ಆಯಿತು. ಇನ್ನು ಆ ಕುರಿತು ಅಲ್ಲಾಹು ಮತ್ತು ಅವನ ಸಂದೇಶವಾಹಕರು ಒಂದು ತೀರ್ಮಾಣ ನೀಡುವ ವರೆಗೆ ನೀವು ನನ್ನನ್ನು ಸಮೀಪಿಸಬಾರದು" ಬಳಿಕ ಖೌಲ(ರ) ಪ್ರವಾದಿ (ಸ) ರವರ ಬಳಿಗೆ ಹೋದರು.

ಮತ್ತು ಅವರೊಂದಿಗೆ ಸಂಪೂರ್ಣ ವಿಷಯ ಬಿಡಿಸಿಬಿಟ್ಟರು. ಮತ್ತು ಅವರ ಪತಿ ಅವರೊಂದಿಗೆ ಅಸಭ್ಯವಾಗಿ ವರ್ತಿಸುತ್ತಾರೆಂದೂ ಅಗೌರವ ತೋರುತ್ತಾರೆಂದೂ ದೂರಿದರು.

ಪ್ರವಾದಿ (ಸ) ಅವರಿಗೆ ಸಹನೆ ಕೈಗೊಳ್ಳುವಂತೆ ಉಪದೇಶಿಸುತ್ತಾ,

“ಖೌಲ! ಅವರು ನಿಮ್ಮ ತಂದೆಯ ಸಹೋದರ ಪುತ್ರರಾಗಿದ್ದಾರೆ. ಅವರು ವೃದ್ಧರಾಗಿದ್ದಾರೆ. ಅವರ ಕುರಿತು ನೀವು ಅಲ್ಲಾಹನ ಭಯವಿರಿಸಿಕೊಳ್ಳಿರಿ."

"ಅಲ್ಲಾಹನ ಸಂದೇಶವಾಹಕರೇ! ಅವರು ನನ್ನ ಯೌವ್ವನವನ್ನು ತಿಂದು ಬಿಟ್ಟರು. ನನ್ನ ಹೊಟ್ಟೆಯಲ್ಲಿ ಅವರ ಪುಷ್ಪಗಳು ಅರಳಿದವು. ನನಗೀಗ ವಯಸ್ಸಾಯಿತು. ಅದಕ್ಕಾಗಿ ಅವರೀಗ ನನ್ನನ್ನು ತಾಯಿಗೆ ಸಮಾನರೆಂದು ಬಿಟ್ಟರು. ಹೇ ಅಲ್ಲಾಹ್! ನಾನು ನಿನ್ನೊಂದಿಗೆ ನನ್ನ ವೇದನೆಯನ್ನು ತೋಡಿಕೊಳ್ಳುತ್ತೇನೆ."  ಖೌಲ(ರ) ಅಳುತ್ತಲೇ ಇಷ್ಟು ಮಾತುಗಳನ್ನು ಹೇಳಿ ಮುಗಿಸಿದರು.

ಪ್ರವಾದಿ (ಸ) ಈ ದಂಪತಿಗಳ ಕುರಿತಾಗಿ ಅಲ್ಲಾಹ್‌ನ ಆದೇಶವನ್ನು ಕಾಯತೊಡಗಿದರು. ಖೌಲ(ರ) ಇನ್ನೂ ಪ್ರವಾದಿ (ಸ) ರವರ ಮನೆಯಲ್ಲಿ ಕುಳಿತು ಕೊಂಡೇ ಇದ್ದರು. ಜಿಬ್ರೀಲ್(ಅ) ಅಲ್ಲಾಹನ ಸಂದೇಶ ಹೊತ್ತು ಅಲ್ಲಿ ಹಾಜರಾದರು.

ಅಲ್ಲಾಹ್‌ನ ಸಂದೇಶವಾಹಕರು ಖೌಲ(ರ) ರವರ ಕಡೆ ನೋಡುತ್ತಾ ನಮ್ರವಾಗಿ "ಸಾಧ್ವಿ ಖೌಲ! ಅಲ್ಲಾಹು ನಿಮ್ಮ ಮತ್ತು ನಿಮ್ಮ ಪತಿಯ ಕುರಿತು ‘ವಹೀ’ ಇಳಿಸಿ ಕೊಟ್ಟಿದ್ದಾನೆ" ಎನ್ನುತ್ತಾ ಅವರು ಪಠಿಸಲಾರಂಭಿಸಿದರು.

﴿قَدْ سَمِعَ اللَّهُ قَوْلَ الَّتِي تُجَادِلُكَ فِي زَوْجِهَا وَتَشْتَكِي إِلَى اللَّهِ وَاللَّهُ
يَسْمَعُ تَحَاوُرَكُمَا إِنَّ اللَّهَ سَمِيعٌ بَصِيرٌ﴾

**"ನಿಮ್ಮೊಡನೆ ತನ್ನ ಪತಿಯ ವಿಷಯದಲ್ಲಿ ವಾದಿಸುತ್ತಿರುವ ಹಾಗೂ ಅಲ್ಲಾಹನೊಡನೆ ಮೊರೆಯಿಡುತ್ತಲಿರುವ ಸ್ತ್ರೀಯ ಮಾತನ್ನು ಅಲ್ಲಾಹ್ ಆಲಿಸಿದರು. ಅಲ್ಲಾಹ್ ನಿಮ್ಮಿಬ್ಬರ ಸಂಭಾಷಣೆಯನ್ನು ಕೇಳುತ್ತಿರುತ್ತಾನೆ. ಅವನು ಎಲ್ಲವನ್ನು ಕೇಳುವವನು ಮತ್ತು ನೋಡುವವನೂ ಆಗಿದ್ದಾನೆ."** ❼

ಬಳಿಕ ಪ್ರವಾದಿ (ಸ) ಖೌಲ(ರ)ರೊಂದಿಗೆ ಹೇಳಿದರು;

"ನೀವು ನಿಮ್ಮ ಪತಿಯೊಂದಿಗೆ ಒಬ್ಬ ಗುಲಾಮನನ್ನು ಸ್ವತಂತ್ರಗೊಳಿಸುವಂತೆ ಹೇಳಿರಿ" ಖೌಲ(ರ) ಹೇಳಿದರು. "ಅಲ್ಲಾಹನ ಸಂದೇಶವಾಹಕರೇ! ಅವರೊಂದಿಗೆ ಗುಲಾಮನನ್ನು ವಿಮೋಚನೆ ಗೊಳಿಸುವಂತಹದ್ದೇನೂ ಇರುವುದಿಲ್ಲ."

ಪ್ರವಾದಿ (ಸ) ಹೇಳಿದರು, "ಹಾಗಾದರೆ ಅರುವತ್ತು ಬಡವರಿಗೆ ಒಂದು ವಸ್ಕ್ (ಸರಿ ಸುಮಾರು 200 ಕೆ.ಜಿ) ಖರ್ಜೂರ ಹಂಚಲಿ"

ಖೌಲ ಹೇಳಿದರು; "ಅಲ್ಲಾಹನ ಸಂದೇಶವಾಹಕರೇ! ಅಷ್ಟು ಖರ್ಜೂರ ಕೂಡಾ ಅವರ ಬಳಿ ಇಲ್ಲ"

ಪ್ರವಾದಿ (ಸ) ಹೇಳಿದರು "ನಾವು ಖರ್ಜೂರದ ಒಂದು ಬುಟ್ಟಿಯನ್ನು ಕೊಟ್ಟು ಅವರಿಗೆ ಸಹಾಯ ಮಾಡುತ್ತೇವೆ."

ಖೌಲ ಹೇಳಲಾರಂಭಿಸಿದರು, "ಅಲ್ಲಾಹನ ಪ್ರವಾದಿಗಳೇ! ಅಲ್ಲಾಹ್‌ನಾಣೆ! ನಾನು ಕೂಡಾ ಒಂದು ಬುಟ್ಟಿಯನ್ನು ಕೊಟ್ಟು ಅವರಿಗೆ ಸಹಾಯ ಮಾಡುತ್ತೇನೆ."

ಆಗ ಪ್ರವಾದಿ (ಸ) ಹೇಳಿದರು, "ಸರಿ. ನೀವು ಹೋಗಿ ನಿಮ್ಮ ಪತಿಯ ಪರವಾಗಿ ಖರ್ಜೂರವನ್ನು ದಾನ ಮಾಡಿರಿ. ನಾನು ಮತ್ತೊಮ್ಮೆ ನಿಮಗೆ ನಿಮ್ಮ ಪತಿಯ ಕುರಿತು ಸದ್ವರ್ತನೆಯ ಉಪದೇಶ ಮಾಡುತ್ತೇನೆ." ❽

ಪ್ರವಾದಿ (ಸ)ರಿಗೆ ಜನರ ಖಾಸಗಿ ವಿಷಯಗಳನ್ನು ಇತ್ಯರ್ಥಗೊಳಿಸುವ ಸಂದರ್ಭದಲ್ಲೂ ನಮ್ರತೆ, ಸಹನಾಶೀಲತೆ ಮತ್ತು ಇಚ್ಛಾಶಕ್ತಿಯನ್ನು ದಯಪಾಲಿಸಿದ ಅಲ್ಲಾಹನು ಪರಮ ಪವಿತ್ರನು.

ನನಗೆ ಸ್ವತಹಾ ನನ್ನ ಪತ್ನಿ ಮತ್ತು ಮಕ್ಕಳೊಂದಿಗೆ, ಇವರಿಗಿಂತ ಮೊದಲು ನನ್ನ ಸಹೋದರಿಯರು ಮತ್ತು ತಾಯಿಯೊಂದಿಗೆ ಭಾವನಾತ್ಮಕವಾಗಿ ವ್ಯವಹರಿಸುವ, ನನ್ನ ಮಾತು - ಕೃತಿ ಮತ್ತು ನಡವಳಿಕೆಗಳಲ್ಲಿ ಸೌಜನ್ಯತೆಯನ್ನು ಪ್ರದರ್ಶಿಸುವ ಅನುಭವವಾಗಿದೆ. ನನಗೆ ಈ ಕ್ರಮದಲ್ಲಿ ಎಂತಹಾ ಯಶಸ್ಸು ಸಿದ್ಧಿಯಾಗಿದೆ ಎನ್ನುವುದನ್ನು ಕೇವಲ ನನ್ನನ್ನು ಪ್ರತಿನಿತ್ಯ ಕಂಡರಿಯುತ್ತಿದ್ದ ಜನರಷ್ಟೆ ವಿವರಿಸಬಲ್ಲರು.

ಒಂದು ಮಾತಂತೂ ಸತ್ಯ. ಸ್ವಯಂ ಆತ್ಮ ಗೌರವ ವಿರುವವರಷ್ಟೇ ಮಹಿಳೆಯರನ್ನು ಗೌರವ ಪೂರ್ವಕವಾಗಿ ಕಾಣುವರು. ಮತ್ತು ಸ್ತ್ರೀಯರನ್ನು ಭೋಗದ ವಸ್ತುವಾಗಿ ಕಾಣುವವರು ಸ್ವಯಂ ನಿಕೃಷ್ಟರು.

**ಸಾರಾಂಶ: "ಹೆಣ್ಣು ತನ್ನ ಪತಿಯು ಕುರೂಪಿಯಾದರೂ, ನಿರುದ್ಯೋಗಿಯಾದರೂ, ಬಡವ, ದರಿದ್ರನಾದರೂ ಸಹಿಸಿಕೊಂಡಾಳು ಅವಳು ತನ್ನ ಪತಿಯ ಕೆಟ್ಟಸ್ವಭಾವಗಳನ್ನು ಎಂದಿಗೂ ಸಹಿಸಲಾರಳು."**

❶ ಸಹೀಹ್ ಮುಸ್ಲಿಮ್, ಹದೀಸ್ 2631

❷ ಸಹೀಹ್ ಮುಸ್ಲಿಮ್, ಹದೀಸ್ 2548

❸ ಸಹೀಹ್ ಮುಸ್ಲಿಮ್, ಹದೀಸ್ 1467, ಜಾಮಿಅ್ ತಿರ್ಮುದಿ, ಹದೀಸ್ 1163

❹ ಸುನನು ಅಬೂದಾವೂದ್, ಹದೀಸ್ 2146

❺ ಜಾಮಿಉತ್ತಿರ್‌ಮುದಿ, ಹದೀಸ್ 3895, ಸುನನು ಇಬ್ನ್ ಮಾಜ, ಹದೀಸ್ 1977

❻ ಸೀರತುನ್ನಭವಿಯ್ಯ, ಇಬ್ನ್‌ಹಿಷಾಮ್ 3/51, 52

❼ ಸೂರಃ ಮುಜಾದಲ 1

❽ ಮುಸ್ನದ್ ಅಹ್ಮದ್, 6/410 ಈ ವರದಿಯು ಸನದಿನ ಪ್ರಕಾರ ದುರ್ಬಲವಾಗಿದೆ.

# ಮಕ್ಕಳು

ಬಾಲ್ಯದಲ್ಲಿ ಎದುರಾಗುವ ಕೆಲವು ಘಟನೆಗಳು, ಅಸಹನೀಯವಾದ ಸನ್ನಿವೇಶಗಳು ಇಂದು ಕೂಡಾ ನಮ್ಮ ಸ್ಮೃತಿ ಪಟಲದಲ್ಲಿ ಅಚ್ಚ ಹಸಿರಾಗಿರುತ್ತದೆ. ಇವತ್ತೋ... ನಿನ್ನೆಯೋ ಸಂಭವಿಸಿತೊ ಎಂಬಂತೆ ಅದು ಭಾಸವಾಗುತ್ತದೆ.

ನೀವು ನಿಮ್ಮ ದೃಷ್ಟಿಯನ್ನೂ ಗಮನವನ್ನೂ ಸ್ವಲ್ಪ ನಿಮ್ಮ ಸ್ಮೃತಿ ಪಟಲದಲ್ಲಿ ಮರೆಯಾಗಿ ಕುಳಿತಿರುವ ಗತ ಜೀವನದ ಕಡೆಗೊಯ್ಯಿರಿ. ನಿಮಗಲ್ಲಿ ಸಂತೋಷವೂ ದುಃಖವೂ ತುಂಬಿದ ಹಲವಾರು ಅಧ್ಯಾಯಗಳು ಕಂಡು ಬರುವುದು. ನೀವು ನಿಮ್ಮ ಶಾಲಾ ಜೀವನದಲ್ಲಿ ಯಾವುದೋ ಸ್ಪರ್ಧೆಯಲ್ಲಿ ಭಾಗವಹಿಸಿ ಬಹುಮಾನ ಗಳಿಸಿದ ಚಿತ್ರಣವು ನಿಮ್ಮ ಕಣ್ಮುಂದೆ ಬರುವುದು. ಸಭೆಯೊಂದರಲ್ಲಿ ಯಾರೊ ನಿಮ್ಮನ್ನು ಅಭಿನಂಧಿಸಿದ ಘಟನೆಯು ಜೀವ ಪಡೆದು ನಿಮ್ಮನ್ನು ಉಲ್ಲಸಿತರಾಗಿ ಮಾಡುವುದು. ಇದು ಮತ್ತು ಇಂತಹಾ ಹಲವಾರು ಸಂತೋಷದ ಘಟನೆಗಳನ್ನು ನೀವು ಎಂದಿಗೂ ಮರೆಯಲಾರಿರಿ. ಇದೇ ಪ್ರಕಾರ ನಿಮ್ಮ ಬಾಲ್ಯದಲ್ಲಿ ನೀವು ಎದುರಿಸಿದಂತಹಾ ದುಃಖವೂ ಪರಿತಾಪಕರವೂ ಆದ ಹಲವಾರು ಘಟನೆಗಳೂ ನಿಮ್ಮ ನೆನಪಿನ ಅಂಗಳದಲ್ಲಿ ಚಿರಸ್ಥಾಯಿಯಾಗಿರುವುದು. ಉಸ್ತಾದ್‌ರಿಂದ ಪೆಟ್ಟುತಿಂದದ್ದು, ಶಾಲೆಯಲ್ಲಿ ಯಾರೊಂದಿಗೊ ಜಗಳವಾಡಿದ ಘಟನೆ ಇದರಿಂದ ನಿಮಗೆ ನಿಮ್ಮ ಮಾತಾಪಿತರು ಮತ್ತು ಕುಟುಂಬಸ್ಥರಿಂದ ಬಯ್ಗಳು ತಿನ್ನುವಂತಾಗಿರುವುದು. ಇತ್ಯಾದಿ,

ಮಕ್ಕಳೊಂದಿಗೆ ಸದ್ವರ್ತನೆ ತೋರುವುದರಿಂದ ಕೇವಲ ಅವರಷ್ಟೇ ಪ್ರಭಾವಿತರಾಗುವುದಲ್ಲ. ಬದಲಾಗಿ ಅವರ ಮಾತಾ ಪಿತರೂ, ಆಪ್ತರೂ, ಬಂಧುಗಳು ಕೂಡಾ ಇದರ ಪ್ರಭಾವ ಮತ್ತು ಸಂತೋಷದ ಸವಿ ಅನುಭವಿಸುತ್ತಾರೆ. ಪ್ರತ್ಯೇಕವಾಗಿ ಹೇಳುವುದಾದರೆ ಪ್ರೈಮರಿ ಶಾಲೆಯ ಟೀಚರ್‌ರವರ ಕುರಿತು ಅವರ ಪುಟ್ಟ ಸ್ಟೂಡೆಂಟ್‌ಗಳು ಮನೆಗೆ ಹೋಗಿ ರಿಪೋರ್ಟ್ ಮಾಡುತ್ತಲೇ ಇರುತ್ತಾರೆ. "ನಮ್ಮ ಅಧ್ಯಾಪಕರು ತುಂಬಾ ಒಳ್ಳೆಯವರು. "ಅವರು ನಮ್ಮನ್ನು ಹೊಡೆಯುವುದು ಬಿಡಿ ಅವರು ಎಂದೂ ನಮ್ಮನ್ನು ಗದರಿಸುವುದು ಕೂಡಾ ಇಲ್ಲ" ಎಂದೆಲ್ಲಾ ಹೇಳುವಾಗ ಆ ಮಕ್ಕಳ ಮಾತಾಪಿತರಿಗೂ ಅಧ್ಯಾಪಕರನ್ನು ಕಾಣಬೇಕೆಂದು ತೋರುತ್ತದೆ. ಹಾಗೆ ಅವರನ್ನು ಕಂಡು ಪ್ರಶಂಸಿಸಿ ಅವರಿಗೆ ಪ್ರೋತ್ಸಾಹವನ್ನು ನೀಡುತ್ತಾರೆ. ಸಂತೋಷ ಅಥವಾ ಸಂತೃಪ್ತಿಯನ್ನು ಸೂಚಿಸುವ ಈ ಕ್ರಮ ಕೆಲವೊಮ್ಮೆ ಮುಖಾಮುಖಿಯಾಗಿ ನಡೆದರೆ ಇನ್ನು ಕೆಲವೊಮ್ಮೆ ಉಡುಗೊರೆ ನೀಡುವ ಮೂಲಕ ಅಥವಾ ಪತ್ರ ಬರೆಯುವ ಮೂಲಕವೂ ನಡೆಯುತ್ತದೆ. ಆದ್ದರಿಂದ ಸಣ್ಣ ಮಕ್ಕಳ ಮುಂದೆ ಮಂದಹಾಸ ಬೀರುವುದನ್ನು, ನಸು ನಗುವುದನ್ನು ಮಾಮೂಲಿ ಎಂದು ಭಾವಿಸಬೇಡಿ. ನಿಮ್ಮ ಉತ್ತಮ ವರ್ತನೆಯೇ ಮಕ್ಕಳ ಹೃದಯಲ್ಲಿ ನಿಮಗೆ ಸ್ಥಾನ ಕಲ್ಪಿಸಿಕೊಡುತ್ತದೆ.

ಒಮ್ಮೆ ನಾನು ಒಂದು ವಸತಿ ಶಾಲೆಯ ಮಕ್ಕಳಿಗೆ ನಮಾಝ್‌ನ ಕುರಿತು ಉಪನ್ಯಾಸ ನೀಡಿದೆ. ನಾನು ಅವರೊಂದಿಗೆ ನಿಮ್ಮ ಪೈಕಿ ಯಾರಿಗಾದರೂ ನಮಾಝ್‌ನ ಶ್ರೇಷ್ಠತೆಯ ಕುರಿತು ಯಾವುದಾದರೂ ಹದೀಸ್ ನೆನಪಿದ್ದರೆ ಹೇಳಿರಿ" ಎಂದು ಹೇಳಿದೆ. ತಕ್ಷಣ ಒಂದು ಪುಟ್ಟ ಎದ್ದು ನಿಂತು ಹೇಳಿದ "ಪ್ರವಾದಿ (ಸ)ರವರು ಹೇಳಿರುವರು

«بَيْنَ الرَّجُلِ وَبَيْنَ الْكُفْرِ أَوِ الشِّرْكِ تَرْكُ الصَّلَاةِ»

**"ವ್ಯಕ್ತಿ ಮತ್ತು ಕುಫ್ರ್ ಅಥವಾ ಶಿರ್ಕ್‌ನ ನಡುವಿನ ಅಂತರವು ನಮಾಝ್ ಆಗಿದೆ."❶**

ನನಗೆ ಆ ಉತ್ತರವು ಬಹಳ ಇಷ್ಟವಾಯಿತು. ಎಷ್ಟು ಸಂತೋಷವಾಯಿತೆಂದರೆ ನಾನು ನನ್ನ ಕೈಯ ವಾಚನ್ನು ಬಿಚ್ಚಿ ಆ ಪುಟ್ಟನಿಗೆ ಬಹುಮಾನವಾಗಿ ಕೊಟ್ಟುಬಿಟ್ಟೆ. ನಾನು ಸಮಾನ್ಯವಾಗಿ ಬಹಳ ಕಡಿಮೆ ಬೆಲೆಯ ವಾಚನ್ನೇ ಬಳಸುವವನಾಗಿದ್ದೇನೆ. ಕಾರ್ಮಿಕ ವರ್ಗವು ಉಪಯೋಗಿಸುವಂತಹಾ ವಾಚ್.

ನಾನು ಕೊಟ್ಟ ಬಹುಮಾನ ಆ ಮಗುವಿನಲ್ಲಿ ಅತ್ಯಂತ ಪ್ರಭಾವವನ್ನೇ ಉಂಟುಮಾಡಿತು. ಅವನಿಗೆ ಶಿಕ್ಷಣದಲ್ಲಿ ಅದು ಅಗಾಧವಾದ ಪ್ರೀತಿ ಉಂಟು ಮಾಡಿತು. ಮತ್ತು ಜ್ಞಾನದ ಮಹತ್ವವೇನೆಂದು ಅವನಿಗೆ ತಿಳಿಯಿತು. ಬಳಿಕ ಅವನು ಕುರ್‌ಆನ್ ಕಂಠಪಾಠ(ಹೃದಸ್ಥ) ಮಾಡುವ ಕುರಿತು ಆಸಕ್ತಿ ತೋರಿದ. ವರ್ಷಗಳು ಉರುಳಿತು. ಒಮ್ಮೆ ನಾನೊಂದು ಮಸೀದಿಗೆ ನಮಾಝ್ ನಿರ್ವಹಿಸಲು ಹೋಗಿದ್ದೆ. ನೋಡುವುದೇನು? ಅಂದು ನನ್ನಿಂದ ಬಹುಮಾನ ಪಡೆದಿದ್ದ ಆ ಹುಡುಗ ಆ ಮಸೀದಿಯಲ್ಲಿ ನಮಾಝಿಗೆ ನೇತೃತ್ವ ಕೊಡುತ್ತಿದ್ದಾನೆ! ಈಗ ಅವನು ಯುವಕನಾಗಿದ್ದ. ಒಂದು ಶರಈ ಕಾಲೇಜಿನಲ್ಲಿ ಸ್ನಾತಕೋತ್ತರ ಪದವಿ ಪಡೆದು ಒಂದು ನ್ಯಾಯಾಲಯದ ಅಧೀನದ ಸಂಸ್ಥೆಯೊಂದರಲ್ಲಿ ಸೇವೆ ಸಲ್ಲಿಸುತ್ತಿದ್ದಾನೆ. ನಾನು ಅವನನ್ನು ಗುರುತಿಸಲಿಲ್ಲ, ಆದರೆ ಅವನು ನನ್ನನ್ನು ಗುರುತಿಸಿದನು.

ಯಾವ ಪ್ರಮಾಣದ ಪ್ರೀತಿ ಮತ್ತು ಗೌರವ ಭಾವದಿಂದ ಹಲವಾರು ವರ್ಷಗಳ ಹಿಂದೆ ನಮ್ಮ ಮುಂದೆ ಬಂದಿದ್ದನೋ ಅದರ ಪ್ರಭಾವ ಈಗಲೂ ಅವನಲ್ಲಿ ಸ್ಪಷ್ಟವಾಗಿ ಕಂಡು ಬರುತ್ತಿತ್ತು.

ನನಗೆ ಚೆನ್ನಾಗಿ ನೆನಪಿದೆ. ಒಮ್ಮೆ ರಾತ್ರಿಯ ಒಂದು ಉಪಚಾರಕ್ಕಾಗಿ ನನ್ನನ್ನು ಆಮಂತ್ರಿಸಿದ್ದರು. ಅಲ್ಲಿ ಒಂದು ಪ್ರಕಾಶ ಯುಕ್ತಮುಖದ ಯುವಕನೊಂದಿಗೆ ನನ್ನ ಭೇಟಿ ಯಾಯಿತು. ಅವರು ಬಹಳ ಉತ್ಸಾಹದಿಂದ ನನಗೆ ಸಲಾಮ್ ಹೇಳಿದರು. ಮತ್ತು "ಒಂದು ಸಂದರ್ಭದಲ್ಲಿ ನೀವು ನಮ್ಮ ಸ್ಕೂಲಿನಲ್ಲಿ ಭಾಷಣ ಮಾಡಿದ್ದಿರಿ. ಆಗ ನಾನು ತುಂಬಾ ಸಣ್ಣವನಿದ್ದೆನು" ಎಂದರು.

ಮಕ್ಕಳೊಂದಿಗೆ ತುಸು ಹೆಚ್ಚು ಆತ್ಮೀಯತೆ ಪ್ರಕಟಿಸುವುದು ನನ್ನ ಅಭ್ಯಾಸವಾಗಿತ್ತು. ಅವರಿಗೆ ನಾನು ದೊಡ್ಡವರಿಗಿಂತ ಹೆಚ್ಚು ಪ್ರಾಶಸ್ತ್ಯ ಕಲ್ಪಿಸುತ್ತೇನೆ ಅವರ ಸ್ವಾದ ಪೂರ್ಣವಾದ ಮಾತು ಪರಿಗಣನಾರ್ಹವಲ್ಲದಿದ್ದರೂ ನಾನು ಗಮನ ಕೊಟ್ಟು ಆಲಿಸುತ್ತೇನೆ. ನನ್ನ ಒಬ್ಬರು ಮಿತ್ರರು ಆಗಾಗ ನನ್ನನ್ನು ಕಂಡು ಮಾತನಾಡುತ್ತಾ ಇರುತ್ತಾರೆ. ಆಗೆಲ್ಲಾ ಅವರು ಅವರ ಸಣ್ಣ ಮಗುವನ್ನು ಜೊತೆ ಕರೆದುಕೊಂಡು ಬರುತ್ತಾರೆ. ನಾನು ನನ್ನ ಅಭ್ಯಾಸಾನುಸಾರ ಆ ಪುಟ್ಟನೊಂದಿಗೆ ಪ್ರೀತಿ ಹಂಚಿಕೊಳ್ಳುತ್ತೇನೆ ಮತ್ತು ಅವನೊಂದಿಗೂ ಸ್ನೇಹಭಾವ ತೋರುತ್ತೇನೆ.

ಒಂದು ದಿನ ನನ್ನ ಈ ಮಿತ್ರ ಒಂದು ದೊಡ್ಡ ಸಭೆಯಲ್ಲಿ ಸಿಕ್ಕಿದರು. ಆವರ ಆ ಪುಟ್ಟ ಕಂದನೂ ಅವರೊಂದಿಗಿದ್ದನು. ಅವರಿಬ್ಬರೂ ನನಗೆ ಸಲಾಮ್ ಹೇಳಿದರು. ಬಳಿಕ ನನ್ನ ಮಿತ್ರನನ್ನೊಂದಿಗೆ ಹೇಳಿದರು, "ಮಿತ್ರಾ... ನನ್ನ ಪುಟ್ಟ ಕಂದನ ಮೇಲೆ ನೀವೆಂತಹಾ ಮಂತ್ರ

ಪ್ರಯೋಗಿಸಿದ್ದೀರೋ ಏನೋ... ಕೆಲವು ದಿನ ಮೊದಲು ಅವನ ಅಧ್ಯಾಪಕರು ವಿದ್ಯಾರ್ಥಿಗಳೊಂದಿಗೆ ನೀವು ಭವಿಷ್ಯದಲ್ಲಿ ಏನಾಗಬಯಸುತ್ತೀರೆಂದು ಕೇಳಿದ್ದರು. ಮಕ್ಕಳಲ್ಲಿ ಒಬ್ಬನು ನಾನು ಡಾಕ್ಟರ್ ಆಗ ಬಯಸುತ್ತೇನೆಂದರೆ, ಇನ್ನೊಬ್ಬನು ನಾನು ಇಂಜಿನಿಯರ್ ಆಗುತ್ತೇನೆಂದನು. ನನ್ನ ಪುಟ್ಟ ಕಂದ ಹೇಳಿದ್ದೇನು ಗೊತ್ತೇ... 'ನಾನು ಮಹಮ್ಮದ್ ಆರೀಫಿ  ಆಗುತ್ತೇನೆ' ಎಂದಾಗಿತ್ತು!

ಮಕ್ಕಳೊಂದಿಗೆ ವ್ಯವಹರಿಸುವ ನೆಲೆಯಲ್ಲಿ ಜನರ ಅಭಿರುಚಿ ಬೇರೇ ಬೇರೆ ರೀತಿಯಲ್ಲಾಗಿರುತ್ತದೆ. ಒಬ್ಬರು ಸಭೆಗೆ ಬಂದರೆ ಪ್ರತಿಯೊಬ್ಬರೊಂದಿಗೂ ಹಸ್ತ ಲಾಘವ ಮಾಡುತ್ತಾರೆ. ಆಗ ಅವನೊಂದಿಗೆ ಅವರ ಪುತ್ರನಿದ್ದರೆ ಅವನೂ ತಂದೆಯನ್ನು ಅನುಕರಿಸುತ್ತಾ ಜನರೊಂದಿಗೆ ಹಸ್ತಲಾಘವ ಮಾಡುತ್ತಾನೆ. ಅಲ್ಲಿ ಉಪಸ್ಥಿತರ ಪೈಕಿ ಯಾರಾದರೂ ಈ ಪುಟ್ಟ ಕಂದನೊಂದಿಗೆ ಆತ್ಮೀಯತೆ ತೋರುತ್ತಾರೆ. ಕೆಲವರು ಅಭ್ಯಾಸಾನುಸಾರವಾಗಿ ಹಸ್ತಲಾಘವ ಮಾಡುತ್ತಾರೆ. ಒಬ್ಬರು ಸ್ವಲ್ಪ ಜೋರಾಗಿ ಅವನ ಕೈಯನ್ನು ಗಟ್ಟಿಯಾಗಿ ಹಿಡಿದು ಅಲುಗಾಡಿಸುತ್ತಾ ಸ್ಫೂರ್ತಿಯುತವಾಗಿ ಉತ್ಸಾಹ ಭರಿತ ರೀತಿಯಿಂದ "ಬನ್ನಿ ಪಹಿಲ್ವಾನರೇ.. ಬನ್ನಿ, ನೀವು ಹೇಗಿದ್ದೀರಿ....? ಎಂದು ಕೇಳುತ್ತಾರಾದರೆ ಈ ವ್ಯಕ್ತಿಯ ಚಿತ್ರಣವು ಆ ಪುಟ್ಟ ಕಂದನ ಹೃದಯದಲ್ಲಿ ಪಡಿ ಮೂಡುತ್ತದೆ. ಮತ್ತು ಆ ವ್ಯಕ್ತಿಯ ಕುರಿತು ಕಂದನಲ್ಲಿ ಪ್ರೀತಿ ಮೂಡುತ್ತದೆ.

ನಮ್ಮೆಲ್ಲರ ನೇತಾರ, ಅಲ್ಲಾಹ್‌ನ ಅಂತಿಮ ಸಂದೇಶವಾಹಕರು (ಸ) ಮಕ್ಕಳೊಂದಿಗೆ ಅತೀವ ಪ್ರೀತಿ ವಾತ್ಸಲ್ಯವನ್ನು ಪ್ರಕಟಿಸುತ್ತಿದ್ದರು. ಅನಸ್‌ಬಿನ್ ಮಾಲಿಕ್(ರ)ರವರಿಗೆ ಒಬ್ಬರು ಕಿರಿಯ ಸಹೋದರರಿದ್ದರು. ಪ್ರವಾದಿ (ಸ) ಅವರನ್ನು ತುಂಬಾ ವಾತ್ಸಲ್ಯದಿಂದ ನೋಡುತ್ತಿದ್ದರು. ಮತ್ತು ಅವರನ್ನು ಅಬೂ ಉಮೈರ್ ಎಂಬ ಉಪನಾಮದಿಂದ ಕರೆಯುತ್ತಿದ್ದರು. ಆ ಪುಟ್ಟ ಕಂದನೊಂದಿಗೆ ಒಂದು ಪರಿವಾಳವಿತ್ತು. ಅದರೊಂದಿಗೆ ಅದು ಆಡುತ್ತಿತ್ತು. ಪಾರಿವಾಳವು ಸತ್ತು ಹೋಯಿತು. ಆ ಬಳಿಕ ಪ್ರವಾದಿ (ಸ) ಆ ಮಗುವಿನೊಂದಿಗೆ ಭೇಟಿಯಾದಾಗಲೆಲ್ಲಾ ಪ್ರೀತಿಯಿಂದ "ಅಬೂಉಮೈರ್! ನಿನ್ನ ಪಾರಿವಾಳವೇನಾಯಿತು? ಎಂದು ಕೇಳುತ್ತಿದ್ದರು..❷

ಝೈನಬ್ ಬಿಂತಿ ಉಮ್ಮು ಸಲಮರನ್ನು ಪ್ರವಾದಿ (ಸ) ಪ್ರೀತಿಯಿಂದ "ಯಾಝುವೈನಬ್, ಯಾಝುವೈನಬ್" ಎಂದು ಕರೆಯುತ್ತಿದ್ದರು.❸

ಪ್ರವಾದಿ (ಸ) ಆಟವಾಡುತ್ತಿರುವ ಮಕ್ಕಳ ಮುಂದಿನಿಂದ ಹಾದು ಹೋಗುವಾಗ ಅವರಿಗೆ ಸಲಾಮ್ ಹೇಳುತ್ತಿದ್ದರು.

ಪ್ರವಾದಿ (ಸ) ಅನ್ಸಾರಿಗಳ ಮುಂದಿನಿಂದ ಹೋಗುವಾಗಲೂ ಅವರಿಗೆ ಸಲಾಮ್ ಹೇಳುತ್ತಿದ್ದರು ಮತ್ತು ಅವರ ಮಕ್ಕಳ ತಲೆಯ ಮೇಲೆ ತನ್ನ ಕೈಯನ್ನು ಹರಡುತ್ತಿದ್ದರು.

ಪ್ರವಾದಿ (ಸ) ಯಾವುದಾದರೂ ಯುದ್ಧದಿಂದ ಮರಳುವಾಗ ಮಕ್ಕಳು ಸ್ವಾಗತ ಕೋರಲು ಬಂದರೆ ಮಕ್ಕಳನ್ನು ಎತ್ತಿ ತನ್ನ ಸವಾರಿಯಲ್ಲಿ ಕೂಡಿಸಿಕೊಳ್ಳುತ್ತಿದ್ದರು. ಮುಸ್ಲಿಮರ ಸೈನ್ಯವು ಮೂತಾ ಯುದ್ಧದಿಂದ ಮರಳುವಾಗ ಪ್ರವಾದಿ (ಸ) ಮತ್ತು ಮದೀನಾದ ನಿವಾಸಿಗಳು ಅವರನ್ನು ಸ್ವಾಗತಿಸಲು ಮುಂದೆ ಹೋದರು. ಮದೀನಾದ ಮಕ್ಕಳು ಓಡಿ ಬಂದರು. ಇಸ್ಲಾಮೀ ಯೋಧರನ್ನು ಬಂದು ಸೇರಿದರು. ಪ್ರವಾದಿ (ಸ) ಮಕ್ಕಳನ್ನು ನೋಡಿ ಹೇಳಿದರು,

" ಮಕ್ಕಳನ್ನೂನಿಮ್ಮ ಸವಾರಿಯಲ್ಲಿ ಸೇರಿಸಿಕೊಳ್ಳಿರಿ. ಅಬ್ದುಲ್ಲ ಬಿನ್ ಜಅಫರ್‌ರನ್ನು ನನಗೆ ಕೊಡಿರಿ"

ಅಬ್ದುಲ್ಲ ಬಿನ್ ಜಅಫರ್ ಬಿನ್ ಅಬೀತಾಲಿಬ್‌ರನ್ನು ಕರೆತರಲಾಯಿತು. ಪ್ರವಾದಿ (ಸ) ಅವರನ್ನು ತನ್ನ ಸವಾರಿಯಲ್ಲಿ ಮುಂದೆ ಕೂರಿಸಿಕೊಂಡರು. ❹

ಪ್ರವಾದಿ (ಸ) ಒಮ್ಮೆ ಉದೂ ನಿರ್ವಹಿಸುತ್ತಿದ್ದರು. ಮಹ್ಮೂದ್ ಬಿನ್ ರಬೀಅ್ ಎಂಬ ಐದು ವರ್ಷದ ಬಾಲಕ ಅವರ ಬಳಿಗೆ ಬಂದನು. ಪ್ರವಾದಿ (ಸ) ತನ್ನ ಬಾಯಿಯಲ್ಲಿ ನೀರು ತುಂಬಿಸಿ ಅದನ್ನು ಆ ಬಾಲಕನ ಮುಖಕ್ಕೆ ಚೆಲ್ಲುತ್ತಾ ಪುಟ್ಟನೊಂದಿಗೆ ತಮಾಷೆ ಮಾಡುತ್ತಾರೆ.❺

ಪ್ರವಾದಿ (ಸ) ಸದಾ ಹಸನ್ಮುಖಿಯಾಗಿರುತ್ತಿದ್ದರು. ಅವರನ್ನು ಕಂಡವರ, ಸಂಪರ್ಕಿಸಿದ ಜನರ ಹೃದಯಗಳು ಕೂಡಾ ಒಳಿತಿನ ವಿಶಾಲತೆಯ ಭಾವಗಳಿಂದ ತುಂಬಿ ಕೊಳ್ಳುತ್ತದೆ. ಅವರೊಡನೆ, ಅವರ ಸಭೆಯಲ್ಲಿ ಕುಳಿತುಕೊಂಡ ಯಾರಿಗೂ ಒಂಟಿತನವು ಕಾಡದು.

ಒಂದು ದಿನ ಒಬ್ಬ ವ್ಯಕ್ತಿ ಸವಾರಿಯ ಜಾನುವಾರನ್ನು ಅಪೇಕ್ಷಿಸಿಕೊಂಡು ಪ್ರವಾದಿ (ಸ) ರವರ ಬಳಿಗೆ ಬಂದರು. ಪ್ರವಾದಿ (ಸ) ಅವನೊಂದಿಗೆ ಹೇಳಿದರು, "ನಾನು ನಿಮಗೆ ಹೆಣ್ಣು ಒಂಟೆಯ ಮರಿಯಷ್ಟೆ ನೀಡಬಲ್ಲೆ"

ಆ ವ್ಯಕ್ತಿ ಹೆಣ್ಣು ಒಂಟೆಯ ಮರಿ ನನ್ನ ಭಾರವನ್ನು ಹೊರುವುದೇ ......? ಎಂಬ ಆಲೋಚನೆಯಲ್ಲಿ ಹೇಳಿದರು,

"ಅಲ್ಲಾಹನ ಸಂದೇಶವಾಹಕರೇ ! ಹೆಣ್ಣು ಒಂಟೆಯ ಮರಿಯನ್ನು ಕೊಂಡು ಹೋಗಿ ನಾನೇನು ಮಾಡಲಿ?

ಪ್ರವಾದಿ (ಸ) ನಸುನಗುತ್ತಾ ಹೇಳಿದರು

"ಒಂಟೆಯು ಹೆಣ್ಣು ಒಂಟೆಯ ಮರಿಯೇ ಆಗಿರುವುದಿಲ್ಲವೇ? ❻

ಒಂದು ದಿನ ಪ್ರವಾದಿ (ಸ) ಪ್ರವಾದಿ(ಸ) ನಸು ನಗುತ್ತಾ ಅನಸ್(ರ)ರನ್ನು ಕರೆದರು.

"ಓ ಎರಡು ಕಿವಿಯವನೇ...."❼

ಒಂದು ದಿನ ಒಂದು ಸ್ತ್ರೀ ತನ್ನ ಪತಿಯ ಕುರಿತು ದೂರು ತೆಗೆದುಕೊಂಡು ಬಂದರು. ಪ್ರವಾದಿ(ಸ) ಅವರೊಂದಿಗೆ ಹೇಳಿದರು,

"ಕಣ್ಣಲ್ಲಿ ಬಿಳುಪು ಇರುವವನೇ ಅಲ್ಲವೇ ನಿನ್ನ ಪತಿ...?"❽

ಆ ಹೆಣ್ಣು ಗಾಬರಿಗೊಂಡಳು. ಅವಳು ಅವಳ ಪತಿಯ ದೃಷ್ಟಿ ಕುರುಡಾಗುತ್ತಿದೆಯೇ.. ಎಂದುಕೊಂಡಳು. ಅರಬಿ ಭಾಷೆಯಲ್ಲಿ ಕಣ್ಣು ಬಿಳುಚಿಕೊಳ್ಳುವುದೆಂದರೆ ಕಣ್ಣು ಕುರುಡಾಗುವುದೆಂಬ ಅರ್ಥ ಬರುತ್ತದೆ. ಅಲ್ಲಾಹ್‌ನು ಕೂಡಾ ಈ ಅರ್ಥದಲ್ಲೇ ಆ ಶಬ್ದವನ್ನು ಉಪಯೋಗಿಸಿದ್ದಾನೆ. ಯಅಕೂಬ್ (ಅ)ರವರ ಕುರಿತು ಅಲ್ಲಾಹು ﴿وَابْيَضَّتْ عَيْنَاهُ مِنَ الْحُزْنِ﴾ "ಅವರ ಕಂಗಳು

ದುಃಖದಿಂದ ಬಿಳಿಚಿಕೊಂಡಿತು.❾ಅಥವಾ ಅವರು ಅಂಧರಾದರು.

ಆ ಸ್ತ್ರೀ ಗಾಭರಿಗೊಂಡು ಮನೆಗೆ ಮರಳಿದಳು ತನ್ನ ಪತಿಯ ಕಣ್ಣುಗಳನ್ನು ಸೂಕ್ಷ್ಮವಾಗಿ ಗಮನಿಸತೊಡಗಿದಳು. ಪತಿಯು ಅವಳ ವರ್ತನೆಯ ಬಗ್ಗೆ ವಿಚಾರಿಸಿದಾಗ ಅವಳು "ಪ್ರವಾದಿ (ಸ) ಹೇಳಿದರು ನಿಮ್ಮ ಕಣ್ಣಿನಲ್ಲಿ ಬಿಳುಪು ಇದೆಯಂತೆ" ಎಂದು ಹೇಳಿದಳು. ಅವಳ ಪತಿ ಅವಳ ಮುಗ್ಧತೆಯ ಕುರಿತು ನಗುತ್ತಾ ಹೇಳಿದ "ಹೇ ಚತುರೆಯೇ....! ಪ್ರವಾದಿ (ಸ) ನಿನ್ನ ಪತಿಯ ಕಣ್ಣಿನಲ್ಲಿ ಕರಿಯಾಳಿಗಿಂತ ಹೆಚ್ಚು ಬಿಳುಪಿದೆ ಎಂದು ಹೇಳಿಲ್ಲವೇ... ? ಇದರ ಅರ್ಥ ಎಲ್ಲಾ ಮನುಷ್ಯರ ಕಣ್ಣಿನಲ್ಲೂ ಕಪ್ಪಿಗಿಂತ ಹೆಚ್ಚು ಬಿಳುಪು ಇರುತ್ತದೆ ಎಂದಾಗಿದೆ.

ಪ್ರವಾದಿ (ಸ) ರೊಂದಿಗೆ ಯಾರಾದರೂ ಮನೋಲ್ಲಾಸಕರ ವರ್ತನೆ ತೋರಿದರೆ ಅವರೂ ಅದಕ್ಕೆ ಜೊತೆಗೂಡುತ್ತಿದ್ದರು. ಮತ್ತು ಧಾರಾಳವಾಗಿ ನಗುತ್ತಾ ಮಂದಹಾಸ ಬೀರುತ್ತಲೂ ಇದ್ದರು.

ಉಮರ್(ರ) ಪ್ರವಾದಿ (ಸ) ರೊಂದಿಗೆ ಕೋಣೆಗೆ ಬಂದರು. ಆ ದಿನಗಳಲ್ಲಿ ಪ್ರವಾದಿ (ಸ) ತನ್ನ ಪತ್ನಿಯಂದಿರೊಂದಿಗೆ ಅವರು ಹೆಚ್ಚಿನ ಜೀವನಾಧಾರಕ್ಕೆ ಒತ್ತಾಯಿಸಿದರೆಂಬ ಕುರಿತು ಬೇಸರ ಗೊಂಡಿದ್ದರು.

ಉಮರ್ (ರ) ಪ್ರವಾದಿ (ಸ)ರನ್ನು ಸಂತುಷ್ಟಿಗೊಳಿಸುವ ನೆಲೆಯಲ್ಲಿಹೇಳಿದರು "ಅಲ್ಲಾಹನ ಸಂದೇಶ ವಾಹಕರೇ! ನೀವು ನಮ್ಮ ಅವಸ್ಥೆಯನ್ನು ಒಮ್ಮೆ ಗಮನಿಸಿರಿ. ನಾವು ಕುರೈಷರು ನಮ್ಮ ಸ್ತ್ರೀಯರ ಮೇಲೆ ಅಧಿಕಾರ ಹೊಂದಿದವರಾಗಿದ್ದೇವೆ. ನಮ್ಮ ಪತ್ನಿಯರಲ್ಲಿ ಯಾರೂ ಹೆಚ್ಚಿನ ಜೀವನಾಂಶಕ್ಕೆ ಬೇಡಿಕೆ ಇಟ್ಟರೆ ಕ್ಷಣ ಮಾತ್ರದಲ್ಲಿ ಅವಳ ಪತಿ ಅವಳ ತಲೆ ಕತ್ತರಿಸುತ್ತಿದ್ದನು. ನಾವು ಮದೀನಕ್ಕೆ ಬಂದ ಬಳಿಕ ಕಾಣುವುದೇನು...?

ಇಲ್ಲಿ ಪುರುಷರ ಮೇಲೆ ಸ್ತ್ರೀಯರೇ ನಿಯಂತ್ರಣ ಹೇರುವ ಒಂದು ಸಮೂಹವಿತ್ತು. ನಮ್ಮ ಸ್ತ್ರೀಯರೂ ಈ ಸ್ತ್ರೀಯರಿಂದ ಪ್ರೇರಣೆ ಪಡೆದು ನಮ್ಮ ಮೇಲೆ ಅಧಿಕಾರ ಚಲಾಯಿಸಲು ಪ್ರಾರಂಭಿಸಿದ್ದಾರೆ..."

ಉಮರ್(ರ)ರವರ ಈ ಮಾತನ್ನು ಕೇಳಿ ಪ್ರವಾದಿ (ಸ) ನಕ್ಕರು. ಉಮರ್(ರ) ಇನ್ನೂ ಕೆಲವು ವಿಷಯ ಹೇಳಿದಾಗ ಪ್ರವಾದಿ (ಸ) ಮತ್ತೂ ನಗಾಡಿದರು. [10]

ಹದೀಸ್‌ಗಳಿಂದ ನಮಗೆ ಪ್ರವಾದಿ (ಸ) ಬಾಯಿ ತೆರೆದು ನಗಾಡುತ್ತಿದ್ದರೆಂದೂ ಆಗ ಅವರ ದವಡೆ ಹಲ್ಲುಗಳು ಗೋಚರಿಸುತ್ತಿತ್ತೆಂದೂ ಕಂಡು ಬರುತ್ತದೆ. ಆದ್ದರಿಂದ ಪ್ರವಾದಿ (ಸ) ಸದಾ ಹಸನ್ಮುಖಿ ಮತ್ತು ಸ್ನೇಹಪರ ವ್ಯಕ್ತಿತ್ವವನ್ನು ಪ್ರಕಟಿಸುತ್ತಿದ್ದರೆಂದೂ ಅವರು ಸಮೂಹ ಜೀವಿಯಾಗಿದ್ದರೆಂದೂ ತಿಳಿದು ಬರುತ್ತದೆ. ಜನರೊಂದಿಗೆ ನಾವು ಕೂಡಾ ಎಲ್ಲಾ ರೀತಿಯ ಮನೋಹರವಾದ ವರ್ತನೆ - ಸ್ವಭಾವಗಳನ್ನೂ ಅಳವಡಿಸಿಕೊಂಡರೆ ಜೀವನದ ಎಲ್ಲಾ ಘಟ್ಟಗಳಲ್ಲೂ ನಾವು ಸವಿ ಅನುಭವಿಸಬಹುದಾಗಿದೆ.

**ಸಾರಾಂಶ : "ಮಕ್ಕಳು ಕಲಸಿ ಹದಗೊಳಿಸಿದ ಆವೆ ಮಣ್ಣಿನಂತೆ ಅದಕ್ಕೆ ನಾವು ಬಯಸಿದ ರೂಪವನ್ನು ಕೊಡಬಹುದಾಗಿದೆ."**

1. ಸಹೀಹ್ ಮುಸ್ಲಿಮ್ 82, ಜಾಮಿಉತ್ತಿರ್ಮುದಿ 2619
2. ಸಹೀಹ್ ಬುಖಾರಿ 6129
3. ಝುವೈನಬ್ ಝೈನಬ್‌ನ ವಿಶೇಷಣವಾಗಿದೆ. ಅಂದರೆ ಪುಟ್ಟ-ಪ್ರೀತಿಯ ಝೈನಬ್, ಅರಬಿಗಳು ಯಾರನ್ನಾದರೂ ಪ್ರೀತಿಯಿಂದ ಕರೆಯುವಾಗ ವಿಶೇಷಣವನ್ನು ಕಲ್ಪಿಸಿ ಕರೆಯುವುದು ರೂಢಿಯಾಗಿದೆ. ಝೈನಬ್ ಉಮ್ಮು ಸಲ್ಮಾ ರ ಪುತ್ರಿಯಾಗಿದ್ದಾರೆ. ಅವರ ಪ್ರಥಮ ಪತಿ ಅಬೂಸಲಮರಿಂದ ಹುಟ್ಟಿದವರು. ಅವರು ಪ್ರವಾದಿ (ಸ)ರವರ ಮಡಿಲಲ್ಲೇ ಬೆಳೆದರು.
4. ಸೀರತುನ್ನಬವಿ, ಇಬ್ನ್ ಹಿಷಾಮ್ 4/24
5. ಸಹೀಹ್ ಬುಖಾರಿ 77
6. ಜಾಮಿಉ ತಿರ್ಮುದಿ 1991
7. ಸುನನು ಅಬೂದಾವೂದ್ 5002, ಜಾಮಿಉ ತಿರ್ಮುದಿ 3828
8. ಫೈದುಲ್ ಕದೀರ್ 1837
9. ಯೂಸುಫ್ 84: 12
10. ಸಹೀಹ್ ಬುಖಾರಿ 4913

# ಗುಲಾಮರು ಮತ್ತು ಸೇವಕರೊಂದಿಗೆ ಪ್ರವಾದಿ(ಸ) ಶ್ರೇಷ್ಠರ ನಡವಳಿಕೆ

ಪ್ರವಾದಿ ಮುಹಮ್ಮದ್(ಸ)ರವರು ಜನರ ಹೃದಯದೊಳಗೆ ಸಲೀಸಾಗಿ ಪ್ರವೇಶಿಸಿ ಬಿಡುತ್ತಿದ್ದರು. ಪ್ರವಾದಿ(ಸ)ರವರ ಚಿಕ್ಕಪ್ಪ ಮರಣ ಹೊಂದಿದ ನಂತರ ಅವರ ಮೇಲೆ ಕುರೈಷರ ದೌರ್ಜನ್ಯ-ದಬ್ಬಾಳಿಕೆಗಳು ಮಿತಿ ಮೀರಿತು. ಅವರು ಆಶ್ರಯವನ್ನೂ-ಸಹಾಯವನ್ನೂ ಬಯಸಿ ಸಕೀಫ್‌ಗೋತ್ರಸ್ಥರು ವಾಸಿಸುತ್ತಿದ್ದ ತಾಯಿಫ್‌ನ ಕಡೆಗೆ ಪ್ರಯಾಣಿಸಿದರು. ತಾಯಿಫ್‌ನ ಘಣ್ಯ ಜನರು ಇಸ್ಲಾಮಿನ ಸಂದೇಶಗಳನ್ನು ಸ್ವೀಕರಿಸಿಕೊಳ್ಳುತ್ತಾರೆಂಬ ವಿಶ್ವಾಸ ಅವರಿಗಿತ್ತು. ಅವರು ಒಂಟಿಯಾಗಿ ತಾಯಿಫ್‌ಗೆ ಬಂದರು. ಸಕೀಫ್ ಗೋತ್ರದ ಮೂವರು ಪ್ರಮುಖರನ್ನು ಕಂಡು ಮಾತಾಡಲು ನಿರ್ದರಿಸಿದರು. ಅಬ್ದು ಅಥವಾ ಲೈಲ್, ಮಸ್‌ಊದ್ ಮತ್ತು ಹಬೀಬ್ ಈ ಮೂವರೂ ಅಮ್ರು ಬಿನ್ ಉಮೈರ್‌ನ ಪುತ್ರರಾಗಿದ್ದರು. ಅವರು ಸಕೀಫ್ ಗೋತ್ರದಲ್ಲೂ ತಾಯಿಫ್‌ನ ಪರಿಸರದಲ್ಲೂ ಅತ್ಯಂತ ಪ್ರಭಾವವನ್ನು ಹೊಂದಿದ್ದರು. ಪ್ರವಾದಿ(ಸ)ರವರು ಅವರ ಬಳಿಗೆ ಹೋದರು ಅವರನ್ನು ಅಲ್ಲಾಹನೆಡೆಗೆ ಆಹ್ವಾನಿಸಿದರು. ಮತ್ತು ಸಹಾಯಕ್ಕಾಗಿಯೂ ಆಶ್ರಯಕ್ಕಾಗಿಯೂ ವಿನಂತಿ ಸಲ್ಲಿಸಿದರು. ಆದರೆ ಅವರ ಪ್ರತಿಕ್ರಿಯೆ ಪ್ರವಾದಿ(ಸ)ರವರ ನಿರೀಕ್ಷೆಗೆ ಪೂರಕವಾಗಿರಲಿಲ್ಲ. ಅವರು ಬಹಳ ಕೆಟ್ಟ ರೀತಿಯಲ್ಲಿ ವರ್ತಿಸತೊಡಗಿದರು. ಅವರಲ್ಲಿ ಒಬ್ಬರು ಹೇಳಿದರು, ಅಲ್ಲಾಹನೇನಾದರೂ ನಿನ್ನನ್ನು ಅವನ ಸಂದೇಶವಾಹಕರಾಗಿ ಮಾಡಿದರೆ ನಾನು ಕಅಬಾಲಯದ ಹೊದಿಕೆಯನ್ನು ನನ್ನ ಉಡುಪಾಗಿ ಮಾಡಿಕೊಳ್ಳುವೆನು'' ಇನ್ನೊಬ್ಬರು ಹೇಳಿದರು "ಅಲ್ಲಾಹನಿಗೆ ಅವನ ಸಂದೇಶವಾಹಕರಾಗಿ ಮಾಡಿಕೊಳ್ಳಲು ನಿನ್ನನ್ನು ಬಿಟ್ಟು ಇನ್ನಾರೂ ಸಿಗಲಿಲ್ಲವೇ?'' ಮೂರನೇಯವನು "ಅಲ್ಲಾಹನಾಣೆ! ನಾನು ನಿನ್ನೊಂದಿಗೆ ಯಾವ ಮಾತನ್ನೂ ಹೇಳಲಾರೆ. ನೀನು ಹೇಳುವಂತೆ ನೀನು ಅಲ್ಲಾಹನ ಸಂದೇಶವಾಹಕನೇ ಆಗಿದ್ದರೆ ನನ್ನ ಮಾತು ನಿನ್ನ ಘಣತೆಗೆ ಕುಂದುಂಟು ಮಾಡಬಹುದು. ಇನ್ನು ನೀನು ಅಲ್ಲಾಹನ ಹೆಸರಲ್ಲಿ ಸುಳ್ಳಾಡುತ್ತಿರುವುದಾದರೆ ನನಗೆ ನಿನ್ನೊಂದಿಗೆ ಮಾತಾಡುವುದು ಅತ್ಯಂತ ಅನಿಷ್ಟ ಕಾರ್ಯವೇ ಆಗಿದೆ''

ಪ್ರವಾದಿ(ಸ)ರವರು ಅವರ ಅಮಾನವೀಯ ನಡವಳಿಕೆ, ಅನಾಗರಿಕ ವರ್ತನೆ ಮತ್ತು ಜಾಹಿಲಿಯ್ಯ ಮಾತುಗಳನ್ನು ಕೇಳಿಕೊಂಡು ಮರಳಿ ಹೋಗಲು ಅನುವಾದರು. ಅವರು ಬನೂ ಸಕೀಫ್‌ನವರ ಮೇಲೆ ಇಟ್ಟುಕೊಂಡಿದ್ದ ನಿರೀಕ್ಷೆ ಸಂಪೂರ್ಣ ಹುಸಿಯಾಗಿತ್ತು. ಮಾತ್ರವಲ್ಲದೆ ಈ ಸಂಗತಿಯು ಕುರೈಷರಿಗೆ ತಿಳಿದರೆ ಅವರ ದೌರ್ಜನ್ಯವು ಇನ್ನಷ್ಟು ವರ್ದಿಸೀತು ಎಂಬ ಆಶಂಕೆಯು ಅವರಲ್ಲಿ ಉಂಟಾಯಿತು. ಅವರು ಹೇಳಿದರು, "ನೀವು ಏನು ಮಾಡಬಾರದಿತ್ತೊ ಅದನ್ನು ಮಾಡಿದಿರಿ. ಸರಿ, ಇನ್ನು ಈ ವಿಷಯವನ್ನು ಬಹಿರಂಗ ಪಡಿಸಬೇಡಿ'' ಆದರೆ ಬನೂ ಅಮ್ರೊ ಬಿನ್ ಉಮೈರ್ ಅವರ ಕುರಿತು ಯಾವುದೇ ರಿಯಾಯಿತಿ ತೋರಲಿಲ್ಲ. ಅವನು ಪುಂಡರನ್ನೂ-ಪೋಕರಿಗಳನ್ನೂ ಮತ್ತು ತನ್ನ ಗುಲಾಮರನ್ನು ಅವರ ಮೇಲೆ ಛೂ ಬಿಟ್ಟರು. ಈ ವ್ಯಕ್ತಿಯನ್ನು ಊರಿನಿಂದ ಹೊರಗೆ ಹೊಡೆದೋಡಿಸಿರಿ ಎಂದರು.

ಜನರು ಪ್ರವಾದಿವರ್ಯರನ್ನು ಸುತ್ತು ವರಿದರು. ಕೇಕೆ ಹಾಕಿದರು ಸಿಳ್ಳು ಹೊಡೆದರು ಹಾಗೆ ಪ್ರವಾದಿ(ಸ)ರವರ ಮೇಲೆ ಕಲ್ಲಿನ ಮಳೆಗೆರೆದರು. ಪ್ರವಾದಿ(ಸ) ರಕ್ತಸಿಕ್ತರಾಗಿ ಅಸಹಾಯಕ ಸ್ಥಿತಿಯಲ್ಲಿ ಉತ್ಬ-ಶೈಬ ಎಂಬ ರಬೀಅನ ಮಕ್ಕಳಿಗೆ ಸೇರಿದ ಒಂದು ತೋಟದಲ್ಲಿ ಅಭಯ ಪಡೆದರು. ಆಗ ಆ ಇಬ್ಬರು ರಬೀಅನ ಮಕ್ಕಳು ಅಲ್ಲಿ ಉಪಸ್ಥಿತರಿದ್ದರು. ತಾಇಫ್‌ನ ಪುಂಡರು ಮರಳಿದರು. ಪ್ರವಾದಿ(ಸ) ದ್ರಾಕ್ಷಿಯ ತೋಟದಲ್ಲಿ ಪ್ರವೇಶಿಸಿದರು. ದ್ರಾಕ್ಷಿಯ ಬಳ್ಳಿಯ ನೆರಳಿನಾಶ್ರಯದಲ್ಲಿ ವಿಶ್ರಮಿಸಿದರು. ರಬೀಅನ ಮಕ್ಕಳು ಅವರನ್ನು ಆ ಸ್ಥಿತಿಯಲ್ಲಿ ಕಂಡು ಅವರೊಳಗಿನ ಮಾನವೀಯ ಅಂತಃಕರಣವು ಜಾಗೃತಗೊಂಡಿತು. ಪ್ರವಾದಿ(ಸ) ವಾಸ್ತವದಲ್ಲಿ ಅವರ ಕುಟುಂಬಸ್ಥರೇ ಆಗಿದ್ದರು. ಅವರು 'ಅದಾಸ್' ಎಂಬ ಹೆಸರಿನ ತಮ್ಮ ಕ್ರೈಸ್ತನಾದ ಒಬ್ಬ ಗುಲಾಮನನ್ನು ಕರೆದು ಒಂದು ತಟ್ಟೆಯಲ್ಲಿ ಸ್ವಲ್ಪ ದ್ರಾಕ್ಷಿಗಳನ್ನಿಟ್ಟು ಆ ವ್ಯಕ್ತಿಯ ಬಳಿಗೆ ಕೊಂಡು ಹೋಗುವಂತೆ ಹೇಳಿದರು. ಅದಾಸ್ ತನ್ನ ಮ್ಹಾಲಕರ ಆದೇಶಕ್ಕೆ ಬದ್ಧನಾಗಿ ದ್ರಾಕ್ಷೆಯನ್ನು ತಂದು ಪ್ರವಾದಿ(ಸ)ರಿಗೆ ತೋರಿಸುತ್ತಾ "ತಿನ್ನಿರಿ"ಎಂದರು. ಪ್ರವಾದಿ(ಸ) "ಬಿಸ್ಮಿಲ್ಲಾ" ಎಂದು ಹೇಳಿ ದ್ರಾಕ್ಷಿಯತ್ತ ಕೈ ಚಾಚಿದರು. ಅದಾಸ್ ಪ್ರವಾದಿ(ಸ)ರವರ ಕಡೆಗೆ ದೃಷ್ಟಿಸುತ್ತಾ ಹೇಳಿದರು,

"ಅಲ್ಲಾಹನಾಣೆ! ಈ ಪರಿಸರದ ಜನರು ಈ ವಚನವನ್ನು ಉಚ್ಛರಿಸುವುದಿಲ್ಲ"

ಪ್ರವಾದಿ(ಸ) ಅವರೊಂದಿಗೆ ಕೇಳಿದರು,

"ಅದಾಸ್! ನೀವು ಯಾವ ಪ್ರದೇಶದವರು? ನಿಮ್ಮ ಧರ್ಮ ಯಾವುದು?

ಅದಾಸ್ ಉತ್ತರಿಸಿದರು,

"ನಾನು ಕ್ರೈಸ್ತನಾಗಿದ್ದೇನೆ, ನೀನವಾದಿಂದ ಬಂದಿದ್ದೇನೆ."

ಪ್ರವಾದಿ(ಸ) ಹೇಳಿದರು,

"ಸಜ್ಜನ ಶ್ರೇಷ್ಟರಾದ ಯೂನುಸ್ ಬಿನ್ ಮತಾರವರ ನಾಡಿನಿಂದಲೇ?" ಉತ್ತರವಾಗಿ ಅದಾಸ್ ಕೇಳಿದರು,

"ಯೂನುಸ್ ಬಿನ್ ಮತಾ ಎಂದರೆ ಯಾರೆಂದು ನಿಮಗೆ ಹೇಗೆ ಗೊತ್ತು?"

ಮಾತುಕತೆ ಮುಂದುವರಿದಂತೆಯೇ ಅದಾಸ್ ತುಂಬ ರೋಮಾಂಚನಗೊಳ್ಳುತ್ತಿದ್ದರು. ಪ್ರವಾದಿ(ಸ) ಹೇಳಿದರು,

"ಅವರು ನನ್ನ ಸಹೋದರನಾಗಿದ್ದಾರೆ ಅವರು ನೆಬಿಯಾಗಿದ್ದರು. ನಾನೂ ನೆಬಿಯಾಗಿದ್ದೇನೆ"❶

ಅದನ್ನು ಕೇಳಿದ ತಕ್ಷಣ ಅದಾಸ್ ಪ್ರವಾದಿ(ಸ)ರವರ ಬಳಿಗೆ ಬಂದು ಅವರ ತಲೆ ಕೈ-ಕಾಲುಗಳನ್ನು ಚುಂಬಿಸಿದರು. ರಬೀಅನ ಪುತ್ರರು ಈ ದೃಶ್ಯವನ್ನು ಕಾಣುತ್ತಿದ್ದರು. ಅವರಲ್ಲಿ ಒಬ್ಬನು ಮತ್ತೊಬ್ಬರೊಂದಿಗೆ ಹೇಳಿದನು "ನೋಡು! ನಿನ್ನ ಗುಲಾಮನು ಹಾಳಾಗಿ ಹೋದಂತೆಯೇ ಸರಿ"

ಅದಾಸ್ ಮರಳಿ ಬಂದರು, ಪ್ರವಾದಿ(ಸ)ರನ್ನು ಕಂಡು ಮತ್ತು ಅವರ ಮಾತನ್ನು ಆಲಿಸಿಕೊಂಡು ಅವರಲ್ಲಿ ಸ್ಫೂರ್ತಿ ಮತ್ತು ಉತ್ಸಾಹ ತುಂಬಿ ತುಳುಕುತ್ತಿತ್ತು, ಮುಖವು ಪ್ರಕಾಶಿಸುತ್ತಿತ್ತು.

ಅವರ ಒಡೆಯನು ಕೇಳಿದರು "ನಿನ್ನ ನಾಶವೇ! ನೀನು ಆ ವ್ಯಕ್ತಿಯ ತಲೆ, ಕೈಕಾಲನ್ನು ಚುಂಬಿಸಿದ್ದೇಕೆ?"

ಅದಾಸ್ ಹರ್ಷಚಿತ್ತರಾಗಿಯೇ ಉತ್ತರಿಸಿದರು "ಒಡೆಯಾ! ಸಮಸ್ತ ಜಗತ್ತಿನಲ್ಲಿ ಆ ವ್ಯಕ್ತಿಗಿಂತ ಉತ್ತಮವಾದ ಇನ್ನೊಂದು ವ್ಯಕ್ತಿ ಇಲ್ಲ. ಅವರು ನನಗೊಂದು ವಿಷಯ ತಿಳಿಸಿದರು ಅದು ಒಬ್ಬ ನೆಬಿಯ ಹೊರತು ಇನ್ನಾರಿಗೂ ಗೊತ್ತಿರಲಿಕ್ಕಿಲ್ಲ" ಅವರ ಮಾಲೀಕರು ಹೇಳಿದರು "ಎಚ್ಚರಿಕೆ ಅದಾಸ್! ಆ ವ್ಯಕ್ತಿ ನಿಮ್ಮನ್ನು ನಿಮ್ಮ ಧರ್ಮದಿಂದ ವಿಮುಖಗೊಳಿಸದಿರಲಿ. ನಿಮ್ಮ ಧರ್ಮ ಅವನ ಧರ್ಮಕ್ಕಿಂತ ಉತ್ತಮವಿದೆ"

ಇಂದು ನಾವು ನಮ್ಮ ಜೀವನದ ಎಲ್ಲಾ ಮಜಲುಗಳಲ್ಲಿ ನಮ್ಮ ಸಂಪರ್ಕದಲ್ಲೇರ್ಪಡುವ ಎಲ್ಲರೊಂದಿಗೂ ಸಮಾನ ರೀತಿಯ ವರ್ತನೆಯನ್ನು ತೋರಬಲ್ಲೆವೇ?

**ಉಪಸಂಹಾರ :**

**"ಜನರೊಂದಿಗೆ ಅವರು ಮನುಷ್ಯರೆಂದು ತಿಳಿದುಕೊಂಡು ಸದ್ವರ್ತನೆ ತೋರಬೇಕೇ ವಿನಹ ಅವರ ಮುಖ, ಸ್ಥಾನ-ಮಾನ, ಹಣ-ಅಂತಸ್ತುಗಳನ್ನು ನೋಡಿಕೊಂಡಲ್ಲ"**

1. ಸೀರತ್ತುನ್ನಭವಿಯ್ಯ ಇಬ್ನ್ ಹಿಷಾಮ್ 2/421



# ವಿರೋಧಿಗಳೊಂದಿಗೆ ಪ್ರವಾದಿ(ಸ)ರವರ ವರ್ತನೆ

ಪ್ರವಾದಿ ಮುಹಮ್ಮದ್ (ಸ)ರವರು ಅವರ ಕಡು ವಿರೋಧಿಗಳೊಂದಿಗೆ ಕೂಡಾ ನ್ಯಾಯ ಮತ್ತು ನೀತಿ ಪೂರ್ವಕವಾಗಿ ವ್ಯವಹರಿಸುತ್ತಿದ್ದರು. ಅವರು ತಮ್ಮ ವಿರೋಧಿಗಳಿಗೆ ಸತ್ಯ ಸಂದೇಶವನ್ನು ತಲುಪಿಸುವ ಮತ್ತು ಅವರಲ್ಲಿ ಧಾರ್ಮಿಕ ಸಂಸ್ಕಾರಗಳನ್ನುಂಟುಮಾಡುವ ನಿಟ್ಟಿನಲ್ಲಿ ತಮ್ಮ ಜೀವನವನ್ನು ಪಣಕ್ಕೊಡ್ಡುತ್ತಿದ್ದರು. ವಿರೋಧಿಗಳಿಂದ ಎದುರಾದ ಎಷ್ಟೋ ರೀತಿಯ ಅಪಹಾಸ್ಯ ಮತ್ತು ಪ್ರತಿರೋಧಗಳನ್ನು ಅವರು ತಾಳ್ಮೆಯಿಂದ ಎದುರಿಸುತ್ತಿದ್ದರು. ಮತ್ತು ಅದನ್ನೆಲ್ಲಾ ಕಡೆಗಣಿಸುತ್ತಿದ್ದರು.

ಅಲ್ಲಾಹನು ಮನುಷ್ಯರಾಶಿಗೆ ಕರುಣೆಯಾಗಿ ನಿಯುಕ್ತಿಗೊಳಿಸಿದ ಆ ಪುಣ್ಯ ಪ್ರವಾದಿಯ ಗುಣ ನಡತೆಯು ಆದರ್ಶಪ್ರಾಯವಾಗಿರುವುದು ಸಹಜವೇ ಆಗಿದೆ. ಅಲ್ಲಾಹನು ಅವರನ್ನು ಕೇವಲ ಸತ್ಯವಿಶ್ವಾಸಿಗಳಿಗಷ್ಟೇ ಕರುಣೆ ಮತ್ತು ಅನುಗ್ರಹವಾಗಿ ನಿಯುಕ್ತಿಗೊಳಿಸಿದ್ದೇ....? ಖಂಡಿತ ಅಲ್ಲ! ಅಲ್ಲಾಹು ಹೇಳುತ್ತಾನೆ,

وَمَآ أَرْسَلْنَٰكَ إِلَّا رَحْمَةً لِّلْعَٰلَمِينَ ○

**"ನಾವು ನಿಮ್ಮನ್ನು ಸಕಲ ವಿಶ್ವಗಳಿಗೆ ಅನುಗ್ರಹವಾಗಿ ಅಲ್ಲದೆ ಕಳುಹಿಸಿಲ್ಲ"❶**

ಯಹೂದಿಗಳ ಪರಿಸ್ಥಿತಿಯ ಕುರಿತು ಅವಲೋಕಿಸಿರಿ. ಅವರು ಅಲ್ಲಾಹನ ಸಂದೇಶ ವಾಹಕರನ್ನು ಅವಹೇಳನ ಮಾಡುತ್ತಿದ್ದರು. ಮತ್ತು ವಿನಾ ಕಾರಣ ದ್ವೇಷಿಸುತ್ತಲೂ ಇದ್ದರು. ಅದಕ್ಕೆ ಹೊರತಾಗಿಯೂ ಪ್ರವಾದಿ(ಸ)ರು ಅವರನ್ನು ಪ್ರೀತಿಸುತ್ತಿದ್ದರು ಮತ್ತು ಅವರ ವಿಷಯದಲ್ಲಿ ಉದಾರ ಮನೋಭಾವ ಪ್ರದರ್ಶಿಸುತ್ತಿದ್ದರು.

ಉಮ್ಮುಲ್ ಮುಅ್ ಮಿನೀನ್ ಆಯಿಷಾ (ರ) ಹೇಳುತ್ತಾರೆ, "ಒಮ್ಮೆ ಯಹೂದಿ ಒಬ್ಬನು ಪ್ರವಾದಿ ಮುಹಮ್ಮದ್ (ಸ)ರ ಮನೆಯ ಮುಂದೆ ಹಾದು ಹೋಗುತ್ತಿದ್ದಾಗ ಪ್ರವಾದಿ(ಸ)ರನ್ನು ಕಂಡು ಅಣಕಿಸುವಂತೆ «السام عليكم» (ಅಸ್ಸಲಾಮು ಅಲೈಕುಮ್‌ಗೆ, ಬದಲಾಗಿ ನೀನು ಸತ್ತು ಹೋಗು ಎನ್ನುವ ಅರ್ಥದಲ್ಲಿ) ಎಂದನು. ಪ್ರವಾದಿ(ಸ)ಅಷ್ಟೇ ಗಂಭೀರವಾಗಿ «وعليكم» 'ನಿನಗೂ ಹಾಗೇ ಹಾಗಲಿ ಎಂದರು'. ಪ್ರವಾದಿ(ಸ)ರಂತು ಅಷ್ಟು ಹೇಳಿ ಮೌನವಾದರು ಆದರೆ ನನಗೆ ಅದನ್ನು ಸಹಿಸಲಾಗಲಿಲ್ಲ. ನಾನು "السام عليكم ನಿನ್ನ ಮೇಲೆ ಅಲ್ಲಾಹನ ಶಾಪವಿರಲಿ ಅವನ ಶಿಕ್ಷೆಯು ನಿನ್ನ ಮೇಲೆ ಎರಗಲಿ" ಎಂದೆನು. ಅದಕ್ಕೆ ಪ್ರತಿಕ್ರಿಯಿಸುತ್ತ ಪ್ರವಾದಿ(ಸ) ಹೇಳಿದರು. "ತಡೆ ಆಯಿಷಾ! ಶಾಂತಳಾಗು, ಕೋಪ ತೋರಬೇಡ ಮತ್ತು ಕೆಟ್ಟ ಮಾತನ್ನು ಆಡಬೇಡ ಎಂದು ಹೇಳಿದರು. ಆಗ ನಾನು ಹೇಳಿದೆ, "ಅವನು ಏನು ಹೇಳಿದ್ದೆಂದು ನೀವು ಆಲಿಸಲಿಲ್ಲವೇ?" ಪ್ರವಾದಿ (ಸ) ಹೇಳಿದರು: ನಾನೇನು ಹೇಳಿದ್ದೆಂದು ನೀನು ಆಲಿಸಲಿಲ್ಲವೇ? ನಾನಾಗಲೇ ಅವನಿಗೆ ಉತ್ತರ ಕೊಟ್ಟು ಬಿಟ್ಟಿದ್ದೆ ನನ್ನ ಅಭಿಶಾಪವು ಸ್ವೀಕರಿಸಲ್ಪಡುತ್ತದೆ. ನನ್ನ ವಿರುದ್ಧ ಅವನ ಯಾವುದೇ ಶಾಪವು ಸ್ವೀಕರಿಸಲ್ಪಡುವುದಿಲ್ಲ."❷

ಹೌದು! ದೂಷಣೆಗೆ ಪ್ರತಿದೂಷಣೆ ಮಾಡುವ ಅವಶ್ಯಕತೆಯಾದರು ಏನಿದೆ? ಅಲ್ಲಾಹು ಹೇಳಲಿಲ್ಲವೇ : وَقُولُوا لِلنَّاسِ حُسْنًا "ಮತ್ತು ಜನರೊಂದಿಗೆ ಅತ್ಯುತ್ತಮ ಮಾತುಗಳನ್ನೇ ಆಡಿರಿ. ❸ಒಂದು ದಿನ ಪ್ರವಾದಿವರ್ಯ(ಸ)ರು ತನ್ನ ಸಹಾಬಿಗಳೊಂದಿಗೆ ಯಾವುದೋ ಒಂದು ಯುದ್ಧಕ್ಕೆ ಹೊರಟರು. ಮರಳಿ ಬರುವಾಗ ಮುಸಲ್ಮಾನರು ಒಂದು ಕಡೆ ಡೇರೆ ಹೂಡಿದರು. ಅಲ್ಲಿ ಮರಗಳ ನೆರಳು ಹರಡಿ ಕೊಂಡಿತ್ತು. ಸಹಾಬಿಗಳು ಅಲ್ಲಲ್ಲಿ ಹರಡಿಕೊಂಡು ವಿಶ್ರಮಿಸಿದರು. ಅಲ್ಲಾಹನ ಸಂದೇಶವಾಹಕರು ಒಂದು ಮರದ ಬಳಿಗೆ ತೆರಳಿದರು. ತನ್ನ ಖಡ್ಗವನ್ನು ಮರಕ್ಕೆ ನೇತಾಡಿಸಿದರು. ಚಾದರವನ್ನು ನೆಲದಲ್ಲಿ ಹಾಸಿ ಮಲಗಿದರು. ಅಷ್ಟರಲ್ಲಿ ಒಬ್ಬ ಮುಶ್ರಿಕ್ ಅಲ್ಲಿ ಪ್ರತ್ಯಕ್ಷನಾದನು. ಅವನು ಪ್ರವಾದಿ(ಸ)ರನ್ನು ಒಬ್ಬಂಟಿಯಾಗಿ ಕಂಡು ಸದ್ದು ಗದ್ದಲು ಉಂಟು ಮಾಡದೇ ಬಂದು ಮರದಲ್ಲಿ ನೇತಾಡಿಸಿದ್ದ ಖಡ್ಗವನ್ನು ಕೈಗೆತ್ತಿಕೊಂಡು ಪ್ರವಾದಿ(ಸ)ರ ಎದೆಗೆ ಗುರಿಯಿಟ್ಟು ಖಡ್ಗವನ್ನು ಎತ್ತಿ ಹಿಡಿದು ಘರ್ಜಿಸುತ್ತಾ ಕೇಳಿದ "ಮುಹಮ್ಮದ್! ನಿನ್ನನ್ನು ಈಗ ನನ್ನ ಕೈಯಿಂದ ಯಾರು ರಕ್ಷಿಸುತ್ತಾರೆ?" ಪ್ರವಾದಿ(ಸ)ರಿಗೆ ಎಚ್ಚರಿಕೆಯಾಯಿತು. ಇದೊಂದು ಸಂದಿಗ್ಧ ಪರಿಸ್ಥಿತಿಯಾಗಿತ್ತು. ಒಬ್ಬ ಶತ್ರು ಖಡ್ಗವನ್ನು ಎತ್ತಿಕೊಂಡು ತನ್ನ ತಲೆಯ ಬಳಿ ನಿಂತಿದ್ದಾನೆ. ಪ್ರವಾದಿ(ಸ)ರು ಒಂಟಿಯಾಗಿದ್ದರು. ಒಂದು ಚಾದರಕ್ಕೆ ಹೊರತಾಗಿ ಅವರ ದೇಹದಲ್ಲಿ ಯಾವುದೇ ಬಟ್ಟೆಯು ಇರಲಿಲ್ಲ. ಸಹಾಬಿಗಳು ದೂರ ನೆರಳಿನಲ್ಲಿ ಮಲಗಿ ನಿದ್ರಿಸುತ್ತಿದ್ದರು. ಆಗ ಶತ್ರುವಿನಲ್ಲಿ ತಾತ್ಕಾಲಿಕ ವಿಜಯದ ನಶೆ ಮತ್ತು ಆವೇಶ ತುಂಬಿಕೊಂಡಿತು. ಅವನು ಮತ್ತೆ ಘರ್ಜಿಸಿದ "ನಿನ್ನನ್ನು ಈಗ ನನ್ನಿಂದ ರಕ್ಷಿಸುವವರ್ಯಾರು?" ಪ್ರವಾದಿ(ಸ) ಅತ್ಯಂತ ಶಾಂತರಾಗಿ ಮತ್ತು ಆತ್ಮವಿಶ್ವಾಸದೊಂದಿಗೆ ಉತ್ತರಿಸಿದರು, " ಅಲ್ಲಾಹು" ಇದು ಕೇಳುತ್ತಿದ್ದಂತೆ ಆ ಮನುಷ್ಯನಿಗೆ ಮಿಂಚು ಬಡಿದಂತಾಯಿತು ಮತ್ತು ಅವನ ಕೈಯಿಂದ ಖಡ್ಗವು ಜಾರಿ ಕೆಳಗೆ ಬಿತ್ತು. ತಕ್ಷಣ ಪ್ರವಾದಿ(ಸ) ಅದನ್ನು ಕೈಗೆತ್ತಿಕೊಂಡು ನಿಂತು ಕೇಳಿದರು, "ಈಗ ನಿನ್ನನ್ನು ನನ್ನಿಂದ ಯಾರು ರಕ್ಷಿಸುತ್ತಾರೆ...?" ಆ ಮನುಷ್ಯನ ಮುಖ ವರ್ಣವು ಬದಲಾಯಿತು. ಅವನಿಗೆ ಅವನನ್ನು ಆವರಿಸಿಕೊಂಡ ಅಪಾಯದ ಅರಿವಾಯಿತು. ಪ್ರಾಣಭೀತಿಯಿಂದ ಜೀವದಲ್ಲಿ ನಡಕ ಉಂಟಾಯಿತು. ಅವನು ಪ್ರವಾದಿ(ಸ)ರೊಂದಿಗೆ ಕರುಣೆ ತೋರುವಂತೆ ವಿನಮ್ರನಾಗಿ ಹೇಳಿದ: "ಯಾರು ಇಲ್ಲ, ಆದರೆ ನನಗೆ ನಿಮ್ಮಿಂದ ಒಳಿತಿನ ನಿರೀಕ್ಷೆ ಇದೆ". ಪ್ರವಾದಿ(ಸ) ಕೇಳಿದರು. 'ಇಸ್ಲಾಮ್ ಸ್ವೀಕರಿಸುತ್ತಿಯಾ?' ಅವನು ಉತ್ತರಿಸಿದ : "ಇಲ್ಲ!! ಆದರೆ ನಿಮ್ಮ ವಿರುದ್ಧ ಯುದ್ಧ ಸಾರುವ ಆ ಜನರೊಂದಿಗೆಂದೂ ಕೈ ಜೋಡಿಸಲಾರೆನೆಂದು ವಾಗ್ದಾನ ಮಾಡುತ್ತೇನೆ." ಪ್ರವಾದಿ(ಸ) ಅವನನ್ನು ಕ್ಷಮಿಸಿದರು ಮತ್ತು ಅವನೊಂದಿಗೆ ಸದ್ವರ್ತನೆ ತೋರಿದರು.

ಈ ವ್ಯಕ್ತಿ ಒಂದು ಸಮೂಹದ ಸರದಾರನಾಗಿದ್ದ. ಅವನು ತನ್ನ ಸಮೂಹದ ಕಡೆಗೆ ಮರಳಿ ಹೋಗಿ ಸಮೂಹವನ್ನು ಇಸ್ಲಾಮಿನ ಕಡೆಗೆ ಆಹ್ವಾನಿಸಿದ. ಅವರೆಲ್ಲರು ಮುಸ್ಲಿಮರಾದರು.❹

ಹೌದು! ಜನರೊಂದಿಗೆ ಅತ್ಯುತ್ತಮವಾಗಿ ವರ್ತಿಸಿರಿ ನೀವು ಅವರ ಹೃದಯವನ್ನು ಗೆದ್ದು ಬಿಡುತ್ತೀರಿ.

ಪ್ರವಾದಿ(ಸ)ರಂತು ತನ್ನನ್ನು ಕಠಿಣವಾಗಿ ವಿರೋಧಿಸುತ್ತಿದ್ದ ಶತ್ರುಗಳೊಂದಿಗೆ ಕೂಡಾ ಉತ್ಕೃಷ್ಟವಾದ ಸ್ವಭಾವವನ್ನು ಪ್ರದರ್ಶಿಸುತ್ತಿದ್ದರು. ಅವರ ಈ ಕಾರ್ಯವೈಖರಿಯೂ ಶತ್ರುಗಳ ಮನ ಪರಿವರ್ತನೆಗೆ ಮತ್ತು ಸನ್ಮಾರ್ಗ ಪ್ರಾಪ್ತಿಗೆ ಕಾರಣವಾಯಿತು.

ಪ್ರವಾದಿ(ಸ)ರು ಜನರ ಮಧ್ಯೆ ಸತ್ಯ ಸಂದೇಶವನ್ನು ತಲುಪಿಸುವ ಕಾರ್ಯವನ್ನು ತೀವ್ರಗೊಳಿಸಿದಂತೆ ಕುರೈಶರು ಸತ್ಯ ಸಂದೇಶವನ್ನು ಅಳಿಸಿ ಹಾಕಲು ಹರ ಸಾಹಸ ಪಡುತ್ತಿದ್ದರು. ಇಸ್ಲಾಮಿನ ಹುಟ್ಟಡಗಿಸುವ ನಿಟ್ಟಿನಲ್ಲಿ ಕುರೈಷರು ಎಲ್ಲಾ ಗೋತ್ರಗಳ ನೇತಾರರೊಂದಿಗೆ ಮಾತುಕತೆ ನಡೆಸಿದರು. ಮುಹಮ್ಮದ್(ಸ) ಸಂದೇಶ ಪ್ರಚಾರವನ್ನು ಹೇಗೆ ನಿಲ್ಲಿಸುವುದೆಂದು, ಗುಂಪು ಗುಂಪಾಗಿ ಇಸ್ಲಾಮಿನಲ್ಲಿ ಪ್ರವೇಶಿಸುತ್ತಿರುವ ಜನರನ್ನು ಅದರಿಂದ ತಡೆಯುವುದು ಹೇಗೆಂದು ಅವರು ಚರ್ಚಿಸಿದರು.

ಕುರೈಶರ ನೇತಾರರೊಬ್ಬರು ಅಭಿಪ್ರಾಯ ಸೂಚಿಸಿದರು, ನಮ್ಮ ಪೈಕಿ ಪ್ರಭಾವಶಾಲಿಯಾಗಿ ಮಾತಾಡಬಲ್ಲ ಅನುಭವಿ ಒಬ್ಬರನ್ನು ಅವನ ಬಳಿಗೆ ಕಳುಹಿಸಿ ಕೊಡೋಣ. ಅವನು ನಮ್ಮ ಸಮೂಹದಲ್ಲಿ ಭಿನ್ನತೆ ಉಂಟು ಮಾಡಿದ್ದಾನೆ. ನಮ್ಮ ಒಗ್ಗಟ್ಟನ್ನು ಮುರಿದಿದ್ದಾನೆ. ನಮ್ಮ ಧರ್ಮವನ್ನು ಅಪಮಾನಿಸಿದ್ದಾನೆ. ಅವನ ಮೇಲೆ ನಮ್ಮ ಮಾತಿನ ಮಂತ್ರವನ್ನು ಪ್ರಯೋಗಿಸೋಣ. ಫಲಿತಾಂಶ ಏನಾಗುತ್ತದೋ ನೋಡೋಣ.

ಜನರು ಹೇಳಿದರು, ಈ ಕಾರ್ಯಕ್ಕೆ ಉತ್ಬಾ ಬಿನ್ ರಬೀಅರಿಗಿಂತ ಶ್ರೇಷ್ಠ ವ್ಯಕ್ತಿ ನಮ್ಮಲ್ಲಿ ಇನ್ನಾರಿದ್ದಾರೆ, ಅವರಷ್ಟೇ ಈ ಕಾರ್ಯವನ್ನು ಅತ್ಯುತ್ತಮವಾಗಿ ನಿಭಾಯಿಸಬಲ್ಲರು. ಅವರು ಉತ್ಬಾ ಬಿನ್ ರಬೀಅರೊಂದಿಗೆ ಹೇಳಿದರು, "ಅಬುಲ್‌ವಲೀದ್! ಈ ಕೆಲಸದ ಹೊಣೆಯನ್ನು ನೀವೇ ವಹಿಸಿಕೊಳ್ಳಿ". ಉತ್ಬಾ ದೂರದೃಷ್ಟಿ ಮತ್ತು ಪ್ರೌಢಿಮೆ ಇರುವ ಸರದಾರರಾಗಿದ್ದರು.

ಅವರು ಹೇಳಿದರು, ಹೇ ಕುರೈಶರ ಸಮೂಹವೇ! ನಾನು ಅವನ ಬಳಿಗೆ ಹೋಗಿ ಅವನೊಂದಿಗೆ ಮಾತುಕತೆ ನಡೆಸಿ, ಅವನ ಮನಒಲಿಸಲು ಪ್ರಯತ್ನಿಸಬೇಕೆಂದು ನೀವು ಬಯಸುತ್ತೀರಾ? ಜನರು ಹೇಳಿದರು. ಹೌದು! ಅಬುಲ್ ವಲೀದ್.

ಉತ್ಬಾ ಅಲ್ಲಿಂದ ಎದ್ದು ನೇರವಾಗಿ ಪ್ರವಾದಿ(ಸ)ರ ಮನೆಯ ಕಡೆ ಹೊರಟರು. ಪ್ರವಾದಿ(ಸ) ಆಗ ಮನೆಯಲ್ಲೇ ಇದ್ದರು. ಉತ್ಬಾ ನಿಂತಲ್ಲಿಯೇ ಪ್ರವಾದಿ (ಸ)ರೊಂದಿಗೆ ಪ್ರಶ್ನಿಸಿದರು, "ಮುಹಮ್ಮದ್! ನೀನು ಶ್ರೇಷ್ಠನೋ ಅಬ್ದುಲ್ಲಾ ಶ್ರೇಷ್ಠರೋ"?

ಪ್ರವಾದಿ(ಸ) : ತನ್ನ ತಂದೆ ಅಬ್ದುಲ್ಲಾರನ್ನು ಗೌರವಿಸುತ್ತಾ ಮೌನಪಾಲಿಸಿದರು. ಉತ್ಬಾ ಎರಡನೇ ಪ್ರಶ್ನೆ ಎಸೆದರು. "ನೀನು ಶ್ರೇಷ್ಠನೊ ಅಬ್ದುಲ್ ಮುತ್ತಲಿಬ್ ಶ್ರೇಷ್ಠರೋ"? ಪ್ರವಾದಿ(ಸ) ತನ್ನ ತಾತ ಅಬ್ದುಲ್ ಮುತ್ತಲಿಬ್‌ರನ್ನು ಗೌರವಿಸಿ ಮೌನಪಾಲಿಸಿದರು. ಉತ್ಬಾ ಹೇಳತೊಡಗಿದರು, ಅವರು ನಿನಗಿಂತ ಶ್ರೇಷ್ಠರಾಗಿದ್ದರೆಂದು ನೀನು ಒಪ್ಪುವುದಾದರೇ, ನೀನು ಯಾವ ಆರಾಧ್ಯರನ್ನು ಅವಹೇಳನ ಮಾಡುತ್ತಿದ್ದಿಯೋ ಅವರು ಅದೇ ಆರಾಧ್ಯರನ್ನು ಆರಾಧಿಸುತ್ತಿದ್ದವರಾಗಿದ್ದಾರೆ. ಇನ್ನು ಅವರಿಗಿಂತ ನೀನು ಶ್ರೇಷ್ಠನೆಂದು ನೀನು ಭಾವಿಸುವುದಾದರೆ ಮಾತಾಡು. ನಾನು ನಿನ್ನ ಮಾತನ್ನು ಆಲಿಸುತ್ತೇನೆ.

ಉತ್ತರವಾಗಿ ಪ್ರವಾದಿ(ಸ) ಏನನ್ನೋ ಹೇಳುವುದಕ್ಕಿಂತ ಮೊದಲೇ ಉತ್ಬಾ ಆವೇಶದಿಂದ ಹೇಳಿದ, "ಅಲ್ಲಾಹನಾಣೆ! ನಾವು ನಮ್ಮ ಸಮೂಹದಲ್ಲಿ ನಿನಗಿಂತ ಅವಲಕ್ಷಣದ ಒಬ್ಬ ವ್ಯಕ್ತಿಯನ್ನು ಕಂಡಿಲ್ಲ. ನೀನು ನಮ್ಮ ಸಮೂಹವನ್ನು ವಿಂಗಡಿಸಿಬಿಟ್ಟೆ. ನಮ್ಮ ಒಗ್ಗಟ್ಟನು ನುಚ್ಚು ನೂರು

ಮಾಡಿಬಿಟ್ಟೆ. ನಮ್ಮ ಧರ್ಮದಲ್ಲಿ ಕುಂದು ಕೊರತೆಗಳನ್ನು ಕಂಡು ಹಿಡಿದು ಅದನ್ನು ಬಹಿರಂಗಪಡಿಸುತ್ತಾ ಅರಬರಲ್ಲಿ ನಮ್ಮ ಗೌರವವನ್ನು ಹಾಳು ಮಾಡಿಬಿಟ್ಟೆ. ಕುರೈಶರಲ್ಲೂ ಒಬ್ಬ ಮಾಟಗಾರ, ಒಬ್ಬ ಜ್ಯೋತಿಷ್ಯನಿದ್ದಾನೆ ಎಂದು ಜನರು ಆಡಿಕೊಳ್ಳುಂತೆ ಮಾಡಿದೆ. ಅಲ್ಲಾಹನಾಣೆ! ನಾವು ಗರ್ಭವತಿ ಸ್ತ್ರೀಯ ಚೀತ್ಕಾರದಂತೆ ಒಂದು ಘೋರ ಚೀತ್ಕಾರವನ್ನು ನಿರೀಕ್ಷಿಸುತ್ತಿದ್ದೇವೆ. ಅದು ಕೇಳಿದೊಡನೆ ಶಸ್ತ್ರಗಳನ್ನು ಕೈಗೆತ್ತಿಕೊಂಡು ಒಬ್ಬರು ಮತ್ತೊಬ್ಬರ ಮೇಲೆ ಎರಗಿ ಬಿಡುವೆವು ಮತ್ತು ಸರ್ವ ನಾಶವಾಗಿ ಹೋಗುವೆವು."

ಕೋಪದಿಂದ ಉತ್ಬಾನ ಮುಖ ವಿವರ್ಣಗೊಂಡಿತ್ತು. ಪ್ರವಾದಿ(ಸ) ವಿನಮ್ರ ವಿದ್ಯಾರ್ಥಿಯಂತೆ ಮೌನವಾಗಿ ಕುಳಿತುಕೊಂಡು ಆಲಿಸುತ್ತಿದ್ದರು. ಉತ್ಬನ ಕೋಪ ಸ್ವಲ್ಪ ತಣ್ಣಗೆ ಆದಂತೆ ಅವನು ತನ್ನ ನೈಜ ಶೈಲಿಗೆ ಬಂದನು ಮತ್ತು ಹೇಳಿದನು. ನೋಡು ಸಹೋದರಾ...! ನೀನು ಸಂಪತ್ತನ್ನು ಗಳಿಸಲೆಂದು ಒಂದು ಹೊಸ ಸಂದೇಶದೊಂದಿಗೆ ಹೊರಟಿದ್ದಾದರೆ ಹೇಳು. ನಾವು ನಮ್ಮ ಸಂಪತ್ತನ್ನೆಲ್ಲ ಕೊಟ್ಟು ನಿನ್ನನ್ನು ಕುರೈಶರಲ್ಲೇ ಒಬ್ಬ ಶ್ರೀಮಂತನಾಗಿ ಮಾಡುವೆವು".

"ಇನ್ನು ನಿನಗೆ ನಾಯಕತ್ವ ಬೇಕೆಂದರೆ ಹೇಳು, ನಾವೆಲ್ಲರೂ ನಿನ್ನ ಧ್ವಜದ ಕೆಳಗೆ ಒಟ್ಟಾಗಿ ಜೀವನ ಪರ್ಯಂತ ನಿನ್ನನ್ನು ನಮ್ಮ ನಾಯಕನಾಗಿ ಮಾಡಿಕೊಳ್ಳುತ್ತೇವೆ."

ಸ್ತ್ರೀಯರನ್ನು ಬಯಸುತ್ತಿದ್ದರೆ ಕುರೈಶರಲ್ಲಿ ನೀನು ಬಯಸುವ 10 ಸ್ತ್ರೀಯರನ್ನು ನಿನಗೆ ವಿವಾಹ ಮಾಡಿ ಕೊಡುತ್ತೇವೆ."

"ಇನ್ನು ನಿನ್ನ ಬಳಿ ಬರುತ್ತಿರುವ 'ಜಿನ್ನ್'ನಿಂದ ನಿನಗೆ ಇಂತಹಾ ಪ್ರೇರಣೆ ಲಭಿಸುತ್ತಿದೆ ಎಂದಾದರೆ ಹೇಳು, ನಾವು ಕೇಳಿದಷ್ಟು ಹಣಕೊಟ್ಟು ನಿನಗೆ ಚಿಕಿತ್ಸೆ ಕೊಡಿಸಿ ನಿನ್ನನ್ನು ಅದರಿಂದ ರಕ್ಷಿಸಿಕೊಳ್ಳುತ್ತೇವೆ. ಜಿನ್ನ್‌ನಿಂದ ಮುಕ್ತಿ ಪಡೆಯುವುದಂತೂ ಅಸಾಧ್ಯವಾದ ಸಂಗತಿಯಲ್ಲ. ಸರಿಯಾದ ಚಿಕಿತ್ಸೆಯಿಂದ ಅದರ ಉಪದ್ರವದಿಂದ ಪಾರಾಗಬಹುದು."

ಉತ್ಬಾ ತನ್ನ ಪ್ರೌಢಿಮೆಯನ್ನೆಲ್ಲಾ ಬಳಸಿ ಪ್ರವಾದಿ(ಸ)ರೊಂದಿಗೆ ಮಾತಾಡುತ್ತಿದ್ದ. ಮಾತ್ರವಲ್ಲದೆ ಮಾತುಮಾತಿಗೂ ಬೇರೆಬೇರೆ ರೀತಿಯ ಆಮಿಷಗಳನ್ನು ಒಡ್ಡುತ್ತಿದ್ದ. ಪ್ರವಾದಿ(ಸ) ಶಾಂತ ಚಿತ್ತರಾಗಿ ಅವನ ಬುರುಡೆಗಳನ್ನು ಕೇಳುತ್ತಿದ್ದರು. ಮಾತುಕತೆ ಅಂತಿಮ ಚರಣಕ್ಕೆ ತಲುಪಿತು. ನಾಯಕತ್ವ, ಸಂಪತ್ತು, ಸ್ತ್ರೀ ಮತ್ತು ಜಿನ್ನ್‌ಗಳಿಗೆ ಚಿಕಿತ್ಸೆ...... ಕೊನೆಗೆ ಉತ್ಬಾ ಮೌನವಾಗಿ ಬಿಟ್ಟರು ಮತ್ತು ಪ್ರವಾದಿ(ಸ)ರವರ ಉತ್ತರವನ್ನು ನಿರೀಕ್ಷಿಸ ತೊಡಗಿದರು. ತಾಳ್ಮೆಯ ಸಾಕಾರ ಮೂರ್ತಿಯಾದ ಪ್ರವಾದಿ(ಸ) ತಲೆ ಎತ್ತಿ ಕುಳಿತರು ಮತ್ತು ಕೇಳಿದರು. "ಅಬ್ದುಲ್ ವಲೀದ್! ನಿಮ್ಮ ಮಾತು ಪೂರ್ತಿಯಾಯಿತಲ್ಲವೇ?" ಉತ್ಬನಿಗೆ ಪ್ರವಾದಿ (ಸ)ರವರ ಈ ಅಪೂರ್ವ ಶೈಲಿಯು ಮೆಚ್ಚಿಗೆಯಾಯಿತು. ಅವನು ಸಂಕ್ಷಿಪ್ತವಾಗಿ

"ಹೌದು" ಎಂದು ಉತ್ತರಿಸಿದ. ಪ್ರವಾದಿ(ಸ) ಹೇಳಿದರು,
"ಈಗ ನನ್ನ ಮಾತನ್ನು ಆಲಿಸಿರಿ" ಉತ್ಬ ಹೇಳಿದ "ಸರಿ"

ಪ್ರವಾದಿ (ಸ) ಹಾಮ್ಮೀಮ್ ಅಸ್ಸಜ್ದ ಅಧ್ಯಾಯವನ್ನು ಪಠಿಲಾರಂಭಿಸಿದರು. ಉತ್ಬ ಆಲಿಸುತ್ತಿದ್ದ. ಒಮ್ಮಿಂದೊಮ್ಮೆಗೆ ಅವನು ನೆಲದಲ್ಲಿ ಕುಳಿತುಕೊಂಡುಬಿಟ್ಟ. ಅವನ ದೇಹ

ಕಂಪಿಸುತ್ತಿತ್ತು. ಅವನು ತನ್ನ ಎರಡೂ ಕೈಗಳನ್ನು ಹಿಂದಕ್ಕೆ ನೆಲದಲ್ಲಿ ಊರಿಕೊಂಡು ಕುಳಿತುಕೊಂಡ. ಪ್ರವಾದಿ(ಸ) ಪಠಿಸುತ್ತಾ ಹೋದರು ಮತ್ತು ಅವನು ಆಲಿಸುತ್ತಲೇ ಇದ್ದ. ಅವರು ಈ ವಚನಕ್ಕೆ ತಲುಪಿದಾಗ,

فَإِنْ أَعْرَضُوا فَقُلْ أَنذَرْتُكُمْ صَاعِقَةً مِّثْلَ صَاعِقَةِ عَادٍ وَثَمُودَ

**"ಇವರೀಗ ವಿಮುಖರಾಗುತ್ತಾರೆಂದಾದರೆ ಇವರೊಡನೆ ಹೇಳಿರಿ ನಾನು ನಿಮ್ಮನ್ನು ಆದ್ ಮತ್ತು ಸಮೂದರ ಮೇಲೆ ಎರಗಿದಂತಹ, ಹಠಾತ್ತನೆ ಸಿಡಿದು ಬೀಳುವ ಒಂದು ಯಾತನೆಯ ಬಗ್ಗೆ ಎಚ್ಚರಿಸುತ್ತೇನೆ" ❺**

ಉತ್ಬ ಅದನ್ನ ಕೇಳಿ ಯಾತನೆಯ ಭಯದಿಂದ ನಡುಗತೊಡಗಿದ. ಅವನು ಥಟ್ಟನೆ ಎದ್ದು ನಿಂತು ತನ್ನ ಕೈಯನ್ನು ಪ್ರವಾದಿ(ಸ)ರವರ ಬಾಯಿಗೆ ಅಡ್ಡ ಹಿಡಿದು ಸಂಕೇತಿಕವಾಗಿ ಪಠಣ ಮುಂದುವರಿಸದಂತೆ ತಡೆದ.ಆದರೆ ಪ್ರವಾದಿ(ಸ) ವಿರಮಿಸಲಿಲ್ಲ. ಪಠಣ ಮುಂದುವರಿಸಿದರು. ತಿಲಾವತಿನ ಸುಜೂದಿನ ವಚನಕ್ಕೆ ತಲುಪಿದಾಗ ಸುಜೂದ್ ಮಾಡಿದರು. ಅದರಿಂದ ಎದ್ದು ಮುಖ ಎತ್ತಿ ಉತ್ಬನ ಕಡೆ ನೋಡುತ್ತಾ ಹೇಳಿದರು.

"ಅಬುಲ್ ವಲೀದ್! ನೀವು ಆಲಿಸಿದಿರಲ್ಲವೇ?"

ಅವನು ಉತ್ತರಿಸಿದ "ಹೌದು"

ಪ್ರವಾದಿ (ಸ) ಹೇಳಿದರು, "ಇನ್ನು ನೀವಾಯಿತು ನಿಮ್ಮ ಕೆಲಸವಾಯಿತು." ❻

ಉತ್ಬ ಮೌನವಾಗಿ ಎದ್ದು ತನ್ನ ಜನರ ಕಡೆಗೆ ಮರಳಿದ. ಅವರು ಕೌತುಕದಿಂದ ಅವನ ಉತ್ತರವನ್ನು ನಿರೀಕ್ಷಿಸುತ್ತಿದ್ದರು. ಉತ್ಬನ ಕಡೆಗುಂದಿದ ಮುಖ ಚಹರೆಯನ್ನು ನೋಡಿ ಕೊಂಡೇ ಅವರು ಪರಸ್ಪರ "ಅಲ್ಲಾಹನಾಣೆ! ಅಬುಲ್ ವಲೀದನ ಹೋಗುವಾಗ ಇದ್ದ ಮುಖ ಬರುವಾಗ ಕಂಡು ಬರುತ್ತಿಲ್ಲ" ಎನ್ನತೊಡಗಿದರು.

ಉತ್ಬ ಅವರ ಮಧ್ಯೆ ಬಂದು ಕುಳಿತುಕೊಂಡಾಗ ಅವರು ಕೇಳಿದರು, "ಅಬುಲ್ ವಲೀದ್! ಏನು ವಿಷಯ?"

ಅವನು ಹೇಳಿದ, "ನಾನು ಜೀವನದಲ್ಲಿ ಹಿಂದೆಂದೂ ಕೇಳಿರದಂತಹಾ ಮಾತನ್ನು ಇಂದು ಕೇಳಿದೆ ಎನ್ನುವುದೇ ದೊಡ್ಡ ವಿಷಯ. ಅಲ್ಲಾಹನಾಣೆ! ಅದು ಕಾವ್ಯವೋ, ಮಾಟವೋ, ಮಂತ್ರವೊ ಖಂಡಿತ ಅಲ್ಲ"

ಕುರೈಷರೇ! ನನ್ನ ಮಾತನ್ನು ಕೇಳಿರಿ. ಬೇಕಿದ್ದರೆ ಅವನ ಹೊಣೆಯನ್ನು ನನಗೆ ವಹಿಸಿ ಬಿಡಿರಿ. ಅವನಿಗೆ ಅವನ ಕೆಲಸವನ್ನು ಮಾಡಲು ಅವನಷ್ಟಕ್ಕೆ ಬಿಟ್ಟು ಬಿಡಿರಿ. ಅಲ್ಲಾಹನಾಣೆ! ಯಾವ ಮಾತನ್ನು ನಾನು ಆಲಿಸಿಕೊಂಡು ಬಂದೆನೋ ಅದರಿಂದ ಒಂದುಮಹಾ ಘಟನೆ ಘಟಿಸುವುದಂತು ಖಂಡಿತ. ಅವನು ಆ ವಚನವನ್ನು ಪಠಿಸುತ್ತಿರುವಾಗ ನಾನು ಅವನ ಬಾಯಿಯ ಮೇಲೆ ಕೈ ಇಟ್ಟು ಅದನ್ನು ತಡೆಯಲು ಪ್ರಯತ್ನಿಸಿದೆ. ನಾನು ಅವನಿಗೆ ಕುಟುಂಬದ ಗೌರವವನ್ನು ಮುಂದಿಟ್ಟುಕೊಂಡು ಅವನನ್ನು ತಡೆಯಲು ಪರಿಶ್ರಮಿಸಿದೆ. ಮತ್ತು ನಿಮಗೆ ಚೆನ್ನಾಗಿ ಗೊತ್ತು ಮುಹಮ್ಮದ್ ಏನನ್ನು

ಹೇಳುತ್ತಾನೋ ಅದನ್ನು ಮಾಡಿ ತೋರಿಸುತ್ತಾನೆ. ನಿಮ್ಮ ಮೇಲೆ ಶಿಕ್ಷೆ ಎರಗಿ ಬಿಡುವುದೋ ಎಂದು ನನಗೆ ಭಯವಾಯಿತು."

ಬಳಿಕ ಅಬುಲ್‌ವಲೀದ್ ಸ್ವಲ್ಪ ಕಾಲ ಮೌನವಾಗಿ ಗಂಭೀರ ಚಿಂತನೆಯಲ್ಲಿ ಮಗ್ನನಾದ. ಅವನ ಸಮುದಾಯದ ಜನರು ಗಾಬರಿಯಿಂದ ಮೌನವಾಗಿದ್ದು, ಉತ್ಬನನ್ನೇ ದೃಷ್ಟಿಸಿ ನೋಡುತ್ತಿದ್ದರು. ಉತ್ಬ ಜನರನ್ನು ಸಂಬೋಧಿಸುತ್ತಾ ಹೇಳಿದ "ಅಲ್ಲಾಹನಾಣೆ ! ಅವನು ಪಠಿಸುವ ವಚನಗಳಲ್ಲಿ ಅವರ್ಣನೀಯವಾದ ಮಾಧುರ್ಯವಿದೆ. ಅದರ ಸೌಂದರ್ಯವು ಕಣ್ಮನವನ್ನು ತಣಿಸುವಂತಿದೆ. ಅದರ ಮೇಲ್ಭಾಗವು ಫಲವತ್ತಾಗಿಯೂ ತಳಭಾಗವು ಪ್ರಶಾಂತವಾಗಿಯೂ ಇದೆ. ಅದು ಖಂಡಿತ ಜಯಶಾಲಿಯಾಗಿಯೇ ತೀರುವುದು. ಅದನ್ನು ಜಯಿಸುವುದು ಅಸಾಧ್ಯವಾದ ಮಾತಾಗಿದೆ. ಅದಕ್ಕೆ ಸವಾಲೊಡ್ಡುವ ಯಾವ ಶಕ್ತಿಯೂ ಇರಲಾರದು. ಖಂಡಿತವಾಗಿಯೂ ಆ ವಚನವು ಯಾವುದೇ ಸೃಷ್ಟಿಯದ್ದಲ್ಲ."

ಜನರು ಉತ್ಬನ ಮಾತನ್ನು ತನ್ಮಯತೆಯಿಂದ ಆಲಿಸುತ್ತಾ ಹೇಳಿದರು. "ಇದು ಮಾಟವಾಗಿದೆ ಅಬುಲ್‌ವಲೀದ್, ಇದು ಮಾಟವಾಗಿದೆ".

ಉತ್ಬ ಆವೇಶದಿಂದ ಉತ್ತರಿಸಿದ "ಅಲ್ಲಾಹನಾಣೆ! ಇಲ್ಲಿ ಮಾಟ ಮಂತ್ರ ಕಾವ್ಯಗಳನ್ನು ನನಗಿಂತ ಚೆನ್ನಾಗಿ ಬಲ್ಲವರು ಯಾರು ಇಲ್ಲ. ನಾನು ಜಿನ್ನ್‌ಗಳ ಕಾವ್ಯಗಳನ್ನು ಆಲಿಸಿದ್ದೇನೆ. ಈ ವಚನಗಳಿಗೆ ಅದು ಯಾವುದು ಸರಿಯಾಗಲಾರದು?"

ಹೀಗೆ ಉತ್ಬ ಅಲ್ಲಾಹನ ಸಂದೇಶವಾಹಕರ ಕುರಿತಾಗಿ ತನ್ನ ಸಮುದಾಯಕ್ಕೆ ವಿವರಣೆ ನೀಡಿದ. ಅವನು ಇಸ್ಲಾಮ್ ಸ್ವೀಕರಿಸಲಿಲ್ಲ ಎನ್ನುವುದು ಸತ್ಯವಾಗಿದ್ದರು ಇಸ್ಲಾಮಿನ ಕುರಿತಾಗಿ ಅವನಲ್ಲಿ ಸಕಾರಾತ್ಮಕ ಭಾವನೆಗಳು ಉಂಟಾಗಿದ್ದವು.

ಪ್ರವಾದಿ(ಸ) ಉತ್ಕೃಷ್ಣ ಸ್ವಭಾವವು ಅವನ ಮೇಲೆ ಎಂತಹ ಪ್ರಭಾವ ಬೀರಿತೆಂದು ಆಲೋಚಿಸಿ ನೋಡಿರಿ. ಅವರು ತನ್ನ ಪ್ರಬಲ ವಿರೋಧಿ ಉತ್ಬನ ಮುಂದೆ ಕೂಡಾ ಸಭ್ಯತೆಗೆ ಮೀರಿದ ವರ್ತನೆ ತೋರಲಿಲ್ಲ.

ತದನಂತರ ಮತ್ತೊಮ್ಮೆ ಕುರೈಷರು ವಿಚಾರ ವಿನಿಮಯಕ್ಕಾಗಿ ಒಂದಾದರು. ಈ ಬಾರಿ ಅವರು ಹುಸೈನ್ ಬಿನ್ ಮನ್‌ಝುರ್ ಖಝಾಯಿಯನ್ನು ಪ್ರವಾದಿ (ಸ) ರ ಮುಂದೆ ಮಾತುಕತೆಗೆ ಕಳುಹಿಸಿದರು ಅವರು ಪ್ರಸಿದ್ಧ ಸಹಾಬಿ ಇಮ್ರಾನ್ ಬಿನ್ ಹುಸೈನ್‌ರ ತಂದೆಯಾಗಿದ್ದರು. ಪ್ರವಾದಿ(ಸ) ಮತ್ತು ಸಹಾಬಿಗಳು ಮಸೀದಿಯಲ್ಲಿ ಕುಳಿತುಕೊಂಡಿದ್ದಾಗ ಅಬೂ ಇಮ್ರಾನ್ ಅಲ್ಲಿಗೆ ಬಂದರು. ಮತ್ತು ಕೋಪೋದ್ರಿಕ್ತ ರೀತಿಯಲ್ಲಿ 'ನೀನು ನಮ್ಮ ಐಕ್ಯತೆಯನ್ನು ನಾಶಮಾಡಿ ಒಗ್ಗಟ್ಟನ್ನು ನುಚ್ಚುನೂರು ಮಾಡಿ ಬಿಟ್ಟೆ' ಎಂದೆಲ್ಲ ಹೇಳತೊಡಗಿದರು. ಪ್ರವಾದಿ(ಸ) ಮೌನವಾಗಿ ಅವರ ಮಾತನ್ನೆಲ್ಲ ಆಲಿಸುತ್ತಾ ಹೋದರು. ಅಬೂ ಇಮ್ರಾನ್ ತನ್ನ ಮಾತನ್ನು ಮುಗಿಸಿದಂತೆ ಪ್ರವಾದಿ(ಸ) ಮಾತಾಡ ತೊಡಗಿದರು. "ಅಬೂ ಇಮ್ರಾನ್! ನೀವು ನಿಮ್ಮ ಮಾತನ್ನು ಮುಗಿಸಿದಿರಷ್ಟೇ" ಅವರು 'ಹೌದು' ಎಂದಾಗ ಪ್ರವಾದಿ(ಸ) "ಹಾಗಾದರೆ ನಾನು ನಿಮ್ಮೊಂದಿಗೆ ಕೆಲವು ಪ್ರಶ್ನೆಗಳನ್ನು ಕೇಳುತ್ತೇನೆ. ಅದಕ್ಕೆ ನೀವು ಉತ್ತರ ಹೇಳಿರಿ" ಎಂದರು ಅಬೂಇಮ್ರಾನ್ 'ಹೇಳಿ ನಾನು ಆಲಿಸುತ್ತಿದ್ದೇನೆ.' ಪ್ರವಾದಿ (ಸ) ಪ್ರಥಮವಾಗಿ 'ಅಬೂ ಇಮ್ರಾನ್! ಇಂದು ನೀವು ಎಷ್ಟು ದೇವರುಗಳನ್ನು

ಪೂಜಿಸುತ್ತಿದ್ದೀರಿ?" ಎಂದು ಕೇಳಿದರು. ಅವನು ಹೇಳಿದ "ಏಳು ದೇವರುಗಳನ್ನು ಪೂಜಿಸುತ್ತೇವೆ. ಆ ಪೈಕಿ ಆರು ಭೂಮಿಯಲ್ಲೂ ಒಂದು ಆಕಾಶದಲ್ಲಿ ಇರುವುದಾಗಿದೆ." ಪ್ರವಾದಿ(ಸ) "ನೀವು ಈ ಪೈಕಿ ಯಾವ ದೇವರೊಂದಿಗೆ ನಿಮ್ಮ ಇಚ್ಛಾಸಾಫಲ್ಯತೆಗಾಗಿ ಮೊರೆ ಇಡುತ್ತೀರಿ ಮತ್ತು ಭಯ ಪಡುತ್ತೀರಿ"?

ಅಬೂ ಇಮ್ರಾನ್ : "ಆಕಾಶದಲ್ಲಿರುವ ದೇವನೊಂದಿಗೆ".

ಪ್ರವಾದಿ(ಸ) : "ಅಬು ಇಮ್ರಾನ್! ನೀವು ಇಸ್ಲಾಮ್ ಸ್ವೀಕರಿಸುವಿರಾದರೆ ನಾನು ನಿಮಗೆ ಬಹಳಷ್ಟು ಫಲಕಾರಿಯಾದ ಎರಡು ವಚನಗಳನ್ನು ಕಲಿಸಿಕೊಡುತ್ತೇನೆ. ಅಬೂ ಇಮ್ರಾನ್ ತಕ್ಷಣ ಮುಸ್ಲಿಮರಾದರು ಮತ್ತು ಕೇಳಿದರು "ಹೇ ಅಲ್ಲಾಹನ ಸಂದೇಶವಾಹಕರೇ ! ನೀವು ನನಗೆ ವಾಗ್ದಾನ ಮಾಡಿದ ಆ ಎರಡು ವಚನಗಳನ್ನು ನನಗೆ ಕಳಿಸಿಕೊಡಿರಿ."

ಪ್ರವಾದಿ (ಸ) ಹೇಳಿದರು.

«قُلِ: اللَّهُمَّ أَلْهِمْنِي رُشْدِي وَ أَعِذْنِي مِنْ شَرِّ نَفْسِي»

**"ನೀವು ಹೇಳಿರಿ, ಹೇ ಅಲ್ಲಾಹ್! ನನ್ನ ಹೃದಯದಲ್ಲಿ ಸನ್ಮಾರ್ಗದ ಬೆಳಕನ್ನು ಹಾಕಿಬಿಡು ಮತ್ತು ನನ್ನ ದೇಹದ ಕೇಡಿನಿಂದ ನನ್ನನ್ನು ಪಾರುಮಾಡು". ❼**

ಸುಬ್‌ಹಾನಲ್ಲಾಹ್! ಇದೆಂತಹ ಉತ್ಕೃಷ್ಟ ವರ್ತನೆಯಾಗಿದೆ ಮತ್ತು ಜನರ ಹೃದಯದಲ್ಲಿ ಅವು ಉಂಟು ಮಾಡುವ ಪ್ರಭಾವವು ಅದ್ಭುತವಾಗಿವೆ. ಇದುವೇ ಇಸ್ಲಾಮಿನ ಸಂದೇಶ ಪ್ರಚಾರದ ಶೈಲಿಯಾಗಿದೆ. ಸತ್ಯ ನಿಷೇಧಿಗಳನ್ನು ಇಸ್ಲಾಮಿನ ಕಡೆಗೆ ಆಮಂತ್ರಿಸುವ ಮತ್ತು ಅವರಲ್ಲಿ ಒಳಿತಿನ ಪ್ರೇರಣೆ ಉಂಟು ಮಾಡುವ ಅತ್ಯುತ್ಕೃಷ್ಟ ಕ್ರಮವಾಗಿದೆ.

ಒಬ್ಬ ವ್ಯಕ್ತಿ ಉನ್ನತ ವ್ಯಾಸಂಗಕ್ಕಾಗಿ ಜರ್ಮನಿಗೆ ಹೋದರು. ಅಲ್ಲಿ ಅವರು ಒಂದು ಫ್ಲ್ಯಾಟ್‌ನಲ್ಲಿ ವಾಸಿಸತೊಡಗಿದರು. ಅವರ ಮುಂದಿನ ಫ್ಲಾಟ್‌ನಲ್ಲಿ ಒಬ್ಬ ಜರ್ಮನಿ ನಿವಾಸಿ ವಾಸಿಸುತ್ತಿದ್ದರು. ಇಬ್ಬರ ನಡುವೆ ಪ್ರತ್ಯೇಕವಾದ ಪರಿಚಯವೇನು ಇರಲಿಲ್ಲ. ಜರ್ಮನಿಗೆ ಆಕಸ್ಮಾತ್ ಒಮ್ಮೆ ಪ್ರಯಾಣ ಹೊರಡಬೇಕಾಯಿತು. ಪತ್ರಿಕೆ ಹಂಚುವವರು ಪ್ರತಿದಿನ ಪತ್ರಿಕೆಯನ್ನು ಅವನ ಮನೆ ಬಾಗಿಲಿನ ಬಳಿ ಇಟ್ಟು ಹೋಗುತ್ತಿದ್ದರು. ಮುಂದಿನ ಮನೆಯ ಈ ವ್ಯಕ್ತಿ ಅಲ್ಲಿ ಪತ್ರಿಕೆ ರಾಶಿ ಬಿದ್ದಿದ್ದನ್ನು ಕಂಡು ಪಕ್ಕದವರಲ್ಲಿ ಆ ಕುರಿತು ವಿಚಾರಿಸಿದಾಗ ಜರ್ಮನಿ ಪ್ರಯಾಣ ಹೋಗಿದ್ದು ತಿಳಿಯಿತು. ಅವರು ಆ ಪತ್ರಿಕೆಗಳನ್ನು ಚೆನ್ನಾಗಿ ಮಡಚಿ ಕಟ್ಟಿ ಅಲ್‌ಮಾರದಲ್ಲಿ ಇಟ್ಟರು. ದಿನನಿತ್ಯದ ಪತ್ರಿಕೆಗಳನ್ನು ಸರಿಯಾಗಿ ಜೋಡಿಸಿ ಇಟ್ಟರು. ಎರಡು ಅಥವಾ ಮೂರು ತಿಂಗಳ ನಂತರ ಜರ್ಮನಿ ಮರಳಿ ಬಂದಾಗ ಆ ವ್ಯಕ್ತಿ ಜರ್ಮನಿಯ ಬಳಿ ಹೋಗಿ ಪ್ರಯಾಣದಿಂದ ಸೌಖ್ಯವಾಗಿ ಹಿಂದಿರುಗಿದ ಕುರಿತು ಅಭಿನಂದಿಸಿದರು. ಸಂಗ್ರಹಿಸಿಟ್ಟ ದಿನ ಪತ್ರಿಕೆಗಳನ್ನು ಹಸ್ತಾಂತರಿಸುತ್ತಾ ಹೇಳಿದರು. "ಬಹುಶಃ ನೀವು ಪ್ರತ್ಯೇಕವಾದ ಯಾವುದೋ ಒಂದು ಲೇಖನವನ್ನು ಅಧ್ಯಯನ ಮಾಡುತ್ತಿರಬೇಕು ಅಥವಾ ಯಾವುದೋ ಕ್ವಿಝ್ ಸ್ಪರ್ಧೆಯಲ್ಲಿ ಭಾಗವಹಿಸುತ್ತಿರಬೇಕು ಎಂದು ಕೊಂಡು ನಾನು ನಿಮ್ಮ ದಿನಪತ್ರಿಕೆಗಳನ್ನು ಸಂಗ್ರಹಿಸುತ್ತಿದ್ದೆ ಎಂದರು. ಜರ್ಮನಿ ಆಶ್ಚರ್ಯದಿಂದ ಅವರ ಕಡೆ ನೋಡುತ್ತಾ ಕೇಳಿದ "ನಿಮಗೆ ಈ ಕಾರ್ಯಕ್ಕಾಗಿ ಯಾವುದಾದರೂ ಪ್ರತಿಫಲದ ನಿರೀಕ್ಷೆ ಇತ್ತೇ?" ಈ

ವ್ಯಕ್ತಿ ಉತ್ತರಿಸಿದರು. "ಇಲ್ಲ! ನಮ್ಮ ಧರ್ಮವು ನಮಗೆ ನೆರೆಹೊರೆಯವರೊಂದಿಗೆ ಉತ್ತಮವಾಗಿ ವರ್ತಿಸುವಂತೆ ಆದೇಶಿಸುತ್ತದೆ. ಆದ್ದರಿಂದ ನಿಮ್ಮೊಂದಿಗೆ ಸದ್ವರ್ತನೆ ತೋರುವುದು ಮತ್ತು ನಿಮ್ಮ ಅವಶ್ಯಕತೆಗಳ ಕುರಿತು ಆಲೋಚಿಸುವುದು ನನ್ನ ಕರ್ತವ್ಯವಾಗಿದೆ."

ಈ ವ್ಯಕ್ತಿ ತನ್ನ ನೆರೆಹೊರೆಯ ಜರ್ಮನಿಯೊಂದಿಗೆ ತೋರುತ್ತಿದ್ದ ಸದ್ವರ್ತನೆಗಳ ಪರಿಣಾಮವಾಗಿ ಜರ್ಮನಿ ಇಸ್ಲಾಮ್ ಸ್ವೀಕರಿಸಿಬಿಟ್ಟ.

ಅಲ್ಲಾಹನಾಣೆ! ಜೀವನವನ್ನು ಸ್ವಾದಿಷ್ಟಗೊಳಿಸುವುದೆಂದರೆ ಹೀಗೆ. ಉತ್ಕೃಷ್ಟ ವರ್ತನೆಯನ್ನು ಆರಾಧನೆ ಎಂದುಕೊಂಡು ಅಳವಡಿಸಿಕೊಳ್ಳುವುದು. ಇಂತಹ ಘಟನೆಗಳು ಚರಿತ್ರೆಯಲ್ಲಿ ಅಲ್ಲಲ್ಲಿ ಕಾಣಲು ಸಿಗುತ್ತದೆ. ಮುಸ್ಲಿಮೇತರರು ಮುಸ್ಲಿಮರ ಸ್ವಭಾವ ವೈಶಿಷ್ಟ್ಯತೆಗಳಿಂದ ಆಹ್ಲಾದಗೊಂಡು ಮುಸ್ಲಿಮರಾಗಿ ಪರಿವರ್ತನೆಗೊಂಡ ಘಟನೆಗಳು.

"ಬೆಳಕಿನ ಕಿರಣ"

**"ಶ್ರೇಷ್ಠ ಸಂದೇಶ ಪ್ರಚಾರಕನು ತನ್ನ ಮಾತಿಗಿಂತ ಮೊದಲು ವರ್ತನೆಯಿಂದ ಸಂದೇಶ ಸಾರುತ್ತಾನೆ"**

1. ಅಲ್ ಅಂಬಿಯಾ 21:107
2. ಸಹೀಹುಲ್ ಬುಖಾರಿ ಹದೀಸ್ ನಂ 6401
3. ಅಲ್ ಬಕರ 2:83
4. ಸಹೀಹುಲ್ ಮುಸ್ಲಿಮ್ ಹದೀಸ್ ನಂ 843, ಮುಸ್ನದ್ ಅಹ್ಮದ್ 3/364, 365
5. ಹಾಮೀಮ್ ಅಸ್ಸಜ್ದ 41:13
6. ಸೀರತುನ್ನಭಯ್ಯಾ, ಇಬ್ನ್‌ಹಿಶಾಮ್ 1/293, 294
7. ಜಾಮಿಉ ತಿರ್ಮಿದಿ ಹದೀಸ್ ನಂ 3483 (ಈ ಹದೀಸ್ ಳುಹೀಫ್ ಆಗಿದೆ.)



# ಮೃಗಗಳೊಂದಿಗೆ ಸದ್ವರ್ತನೆ

ಸದ್ವರ್ತನೆ, ಸತ್‍ಸ್ವಭಾವವನ್ನು ಮೈಗೂಡಿಸಿಕೊಂಡ ಮನುಷ್ಯನ ದೇಹ ಮತ್ತು ಆತ್ಮವು ಅದರ ಪ್ರಭಾವದಿಂದ ಪುಲಕಗೊಂಡಿರುವುದು. ಅವನ ನಡೆ-ನುಡಿ ಸದಾ ಮೆದುವಾಗಿರುವುದು. ಮನಸ್ಸು ಕೋಮಲವಾಗಿರುವುದು. ಅವನುಮೃದು ಧೋರಣೆ, ಸ್ಥಿರ ಚಿತ್ತವುಳ್ಳವರಾಗಿರುತ್ತಾನೆ. ಮನುಷ್ಯರನ್ನು ಬಿಡಿ ಮೃಗಳೊಂದಿಗೂ, ಪಕ್ಷಿಗಳು ಮತ್ತು ಜಡವಸ್ತುಗಳೊಂದಿಗೆ ಕೂಡಾ ಅವನ ವರ್ತನೆ ಮನೋಹರವಾಗಿರುವುದು.

ಅಲ್ಲಾಹನ ಸಂದೇಶವಾಹಕರು(ಸ) ಅವರ ಸಹಾಬಿಗಳೊಂದಿಗೆ ಒಂದು ಪ್ರಯಾಣದಲ್ಲಿದ್ದರು. ಅವರು ಪ್ರಯಾಣದ ಮಧ್ಯೆ ಒಂದು ಸ್ಥಳದಲ್ಲಿ ಠಿಕಾಣಿ ಹೂಡಿದರು. ಪ್ರವಾದಿ(ಸ) ಬಹಿರ್ದೆಸೆಗಾಗಿ ಹೋದರು. ಕೆಲವು ಸಹಾಬಿಗಳು ಒಂದು ಪೊದೆಯೊಳಗೆ ಹೋದರು. ಅಲ್ಲಿ ಅವರು ಒಂದು ಪಕ್ಷಿಯನ್ನು ಕಂಡರು. ಅದರೊಂದಿಗೆ ಎರಡು ಮರಿಗಳೂ ಇದ್ದವು. ಅವರು ಆ ಎರಡು ಮರಿಗಳನ್ನು ಎತ್ತಿಕೊಂಡರು. ಹಕ್ಕಿ ಅವರ ತಲೆಯ ಮೇಲೆ ಹಾರಲು, ಚಡಪಡಿಸಲು ಪ್ರಾರಂಭಿಸಿತು. ಅಷ್ಟರಲ್ಲಿ ಪ್ರವಾದಿ(ಸ) ಅಲ್ಲಿಗೆ ಬಂದರು. ಅವರು ಆ ದೃಶ್ಯವನ್ನು ಕಂಡು ಹೇಳಿದರು, “ಅದನ್ನು ಅದರ ಮರಿಗಳಿಂದ ಬೇರ್ಪಡಿಸಿ ತೊಂದರೆ ಕೊಟ್ಟವರು ಯಾರು? ಅದರ ಮರಿಗಳನ್ನು ಅದಕ್ಕೆ ಮರಳಿಸಿರಿ.’’

ಒಂದು ದಿನ ಪ್ರವಾದಿ(ಸ)ರವರು ಸುಟ್ಟು ಹಾಕಲಾದ ಇರುವೆಯ ಗೂಡನ್ನು ಕಂಡು ಕೇಳಿದರು,

“ಇದಕ್ಕೆ ಬೆಂಕಿ ಹಚ್ಚಿದ್ದು ಯಾರು?’’

ಒಬ್ಬ ಸಹಾಬಿ ಹೇಳಿದರು, “ನಾನು’’

“ಬೆಂಕಿಯ ಸೃಷ್ಟಿಕರ್ತನ ಹೊರತು ಇತರ ಯಾರು ಬೆಂಕಿಯಿಂದ ಯಾತನೆ ನೀಡುವುದು ಸಮಂಜಸವಲ್ಲ’’❶ ಪ್ರವಾದಿ(ಸ) ಅತ್ಯಂತ ಬೇಸರದಿಂದ ಹೀಗೆ ಹೇಳಿದರು.

ಪ್ರವಾದಿ(ಸ)ರವರು ಕೋಮಲ ಹೃದಯದವರೆನ್ನುವುದಕ್ಕೆ ಹಲವಾರು ಉದಾಹರಣೆಗಳನ್ನು ನೀಡಬಹುದು. ಅವರು ಉಝೂ ನಿರ್ವಹಿಸುತ್ತಿರುವಾಗ ಬೆಕ್ಕೇನಾದರೂ ಮುಂದೆ ಬಂದರೆ ಅವರು ಆ ನೀರಿನ ಪಾತ್ರೆಯನ್ನು ಅದರ ಮುಂದಿಡುತ್ತಿದ್ದರು. ಅದು ತನ್ನ ದಾಹ ತೀರಿಸಿಕೊಂಡು ನಂತರ ಉಳಿದ ನೀರಿನಿಂದ ಪ್ರವಾದಿ(ಸ) ಉಝೂ ಪೂರ್ತಿಗೊಳಿಸುತ್ತಿದ್ದರು. ❷

ಒಮ್ಮೆ ಪ್ರವಾದಿ(ಸ) ಒಬ್ಬ ವ್ಯಕ್ತಿಯ ಮುಂದಿನಿಂದ ಹಾದು ಹೋಗುತ್ತಿದ್ದರು. ಆ ವ್ಯಕ್ತಿ ಒಂದು ಕುರಿಯನ್ನು ನೆಲದಲ್ಲಿ ಕವುಚಿ ಹಾಕಿ ಅವನ ಕಾಲನ್ನು ಅದರ ಮೇಲಿಟ್ಟಿದ್ದನು ಮತ್ತು ತನ್ನ ಕೈಗಳಿಂದ ಕತ್ತಿಯನ್ನು ಚೂಪುಗೊಳಿಸುತ್ತಿದ್ದನು. ಕುರಿ ಕತ್ತಿಯನ್ನು ನೋಡುತ್ತಿತ್ತು. ಪ್ರವಾದಿ(ಸ) ಈ ದೃಶ್ಯವನ್ನು ಕಂಡು ಕೋಪಗೊಂಡು ಕೇಳಿದರು,

“ನೀವು ಈ ಕುರಿಯನ್ನು ಎಷ್ಟು ಸಲ ಕೊಲ್ಲಬೇಕೆಂದಿದ್ದೀರಿ? ಅದನ್ನು ಕವುಚಿ ಹಾಕುವ ಮೊದಲೇ ಕತ್ತಿಯನ್ನೇಕೆ ಚೂಪಾಗಿಸಿಕೊಳ್ಳುವುದಿಲ್ಲ.?’’❸

ಒಂದು ದಿನ ಪ್ರವಾದಿ(ಸ)ರು ಇಬ್ಬರು ವ್ಯಕ್ತಿಗಳು ತಮ್ಮ ಒಂಟೆಗಳ ಮೇಲೆ ಕುಳಿತುಕೊಂಡು ಪರಸ್ಪರ ಮಾತುಕತೆಯಲ್ಲಿ ನಿರತರಾಗಿರುವುದನ್ನು ಕಂಡರು. ಪ್ರವಾದಿ(ಸ)ರಿಗೆ ಅದು ಸರಿ ಕಾಣಲಿಲ್ಲ. ಅವರಿಗೆ ಆ ಒಂಟೆಗಳ ಮೇಲೆ ಕನಿಕರ ಉಂಟಾಯಿತು. ತಕ್ಷಣ ಅವರು ಒಂಟೆಗಳನ್ನು ಆಸನಗಳನ್ನಾಗಿ ಮಾಡಿ ಕುಳಿತುಕೊಂಡು ಹರಟೆಯಲ್ಲಿ ತೊಡಗುವುದರಿಂದ ಅವರನ್ನು ತಡೆದರು. ❹ ಅಂದರೆ ಅತ್ಯಾವಶ್ಯಕ ಸಂದರ್ಭಗಳಷ್ಟೇ ಮೃಗಗಳನ್ನು ಸವಾರಿಗಳಾಗಿ ಉಪಯೋಗಿಸಬೇಕು. ಪ್ರಯಾಣ ಮುಗಿದ ತಕ್ಷಣ ಅವುಗಳನ್ನು ಮೇಯಲು ಬಿಡಬೇಕು.

ಪ್ರವಾದಿ(ಸ)ರ ಬಳಿ ಒಂದು ಒಂಟೆ ಇತ್ತು. ಅದರ ಹೆಸರು 'ಅದ್‌ಬಾ' ಎಂದಾಗಿತ್ತು. ಮುಶ್ರಿಕರು ಮದೀನಾದ ಗಡಿ ಪ್ರದೇಶಗಳಲ್ಲಿ ಮೇಯುತ್ತಿದ್ದ ಕೆಲವು ಒಂಟೆಗಳನ್ನು ಅಕ್ರಮವಾಗಿ ಹಿಡಿದು ಮಕ್ಕಾಕ್ಕೆ ಕೊಂಡೊಯ್ದಿದ್ದರು. ಅದ್‌ಬಾ ಕೂಡಾ ಅದರಲ್ಲಿ ಒಳಪಟ್ಟಿತು. ಅದರೊಂದಿಗೆ ಅವರು ಒಂದು ಮುಸ್ಲಿಮ್ ಸ್ತ್ರೀಯನ್ನು ಬಂಧಿಸಿ ಕೊಂಡೊಯ್ದುದರು. ಪ್ರಯಾಣದ ಹಾದಿಯಲ್ಲಿ ಅವರು ಬೀಡು ಬಿಟ್ಟಾಗ ಅವರು ಆ ಒಂಟೆಗಳನ್ನು ಮೇಯಲು ಬಿಡುತ್ತಿದ್ದರು. ಹಾಗೇ ಅವರು ಒಂದು ಕಡೆ ಡೇರೆ ಹೂಡಿ ರಾತ್ರಿಯೆಲ್ಲರು ನಿದ್ದೆಯಲ್ಲಿ ಏರ್ಪಟ್ಟಾಗ ಆ ಸ್ತ್ರೀ ಅವರಿಂದ ತಪ್ಪಿಸಿಕೊಂಡು ಓಡಲು ಪ್ರಯತ್ನಿಸಿದರು. ಅವರಿಗೆ ಪ್ರಯಾಣಕ್ಕೆ ಒಂದು ಸವಾರಿ ಮೃಗದ ಅವಶ್ಯಕತೆ ಇತ್ತು. ಅವರು ಆ ಒಂಟೆಗಳ ಬಳಿ ಬಂದರು. ಯಾವ ಒಂಟೆಯ ಮೇಲೆ ಅವರು ಏರಿದರೂ ಅದು ಕೂಗಾಡ ತೊಡಗುತ್ತಿತ್ತು. ಡೇರೆಯವರು ಎಚ್ಚರಗೊಳ್ಳುತ್ತಾರೆ ಎಂಬ ಭಯದಿಂದ ಅವರು ಒಂದೊಂದಾಗಿ ಎಲ್ಲಾ ಒಂಟೆಗಳ ಹಗ್ಗದ ಕಟ್ಟು ಬಿಡಿಸಿ ಬಿಡುತ್ತಾ ಹೋದರು. ಅವರು ಕೊನೆಗೆ ಅದ್‌ಬಾದ ಬಳಿ ಬಂದರು. ಅದನ್ನು ಅವರು ಆಲುಗಾಡಿಸಿದಾಗ ವಿಧೇಯವೂ, ಅನುಸರಣಾಶೀಲವೂ ಆದ ಒಂಟೆಯಂತೆ ಅದು ವರ್ತಿಸಿತು. ಸ್ತ್ರೀಯು ಒಂಟೆಯ ಮೇಲೆ ಸವಾರಿಯಾಗಿ ಮದೀನಾದ ಕಡೆ ಮರಳಿದರು. ಅದ್‌ಬಾ ವೇಗವಾಗಿ ಮದೀನಾದ ಕಡೆ ಓಡ ತೊಡಗಿತು. ಸ್ತ್ರೀ ಶತ್ರುಗಳಿಂದ ಸುರಕ್ಷಿತಳೆಂದು ದೃಢವಾಗುತ್ತಿದ್ದಂತೆ ಸಂತೋಷದಿಂದ ಕೂಗಿ ಹೇಳಿದಳು.

"ಹೇ ಅಲ್ಲಾಹ್! ನೀನು ಈ ಒಂಟೆಯ ಮೇಲೆ ಸವಾರಿಗೊಳಿಸಿ ನನ್ನನ್ನು ಶತ್ರುಗಳ ಮುಷ್ಟಿಯಿಂದ ರಕ್ಷಿಸಿದೆ. ನಾನಿದೋ ಹರಕೆ ಹೇಳುತ್ತೇನೆ. ನಾನು ಈ ಒಂಟೆಯನ್ನು ನಿನ್ನ ಹೆಸರಿನಲ್ಲಿ ಬಲಿ ನೀಡುತ್ತೇನೆ.''

ಸ್ತ್ರೀ ಸುರಕ್ಷಿಳಾಗಿ ಮದೀನಾ ತಲುಪಿದರು. ಜನರು ಪ್ರವಾದಿ(ಸ)ರ ಒಂಟೆಯನ್ನು ಗುರುತಿಸಿದರು. ಸ್ತ್ರೀ ಅದರಿಂದ ಇಳಿದು ತನ್ನ ಮನೆಗೆ ಹೋದರು. ಜನರು ಅದ್‌ಬಾವನ್ನು ಪ್ರವಾದಿ(ಸ)ರ ಮನೆಗೆ ತಲುಪಿಸಿದರು. ಸ್ತ್ರೀ ಮನೆಯಿಂದ ಹೊರಗೆ ಬಂದು ನೋಡುವಾಗ ಒಂಟೆಯು ಅಲ್ಲಿರಲಿಲ್ಲ. ಅವರು ಅದನ್ನು ಹುಡುಕುತ್ತಾ ಹೊರಟರು. ಅದನ್ನು ದಿಬ್ಹ ಮಾಡಿ ತನ್ನ ಹರಕೆಯನ್ನು ಪೂರ್ತಿಗೊಳಿಸಬೇಕೆನ್ನುವುದು ಅವರ ಉದ್ದೇಶವಾಗಿತ್ತು. ಹುಡುಕುತ್ತಾ ಹುಡುಕುತ್ತಾ ಅವರು ಪ್ರವಾದಿ(ಸ)ರ ಮನೆ ತಲುಪಿದರು. ಮತ್ತು ಪ್ರವಾದಿ ವರ್ಯರಿಗೆ ತನ್ನ ಹರಕೆಯ ಕುರಿತು ಹೇಳಿದರು.

ಪ್ರವಾದಿ(ಸ) ಹೇಳಿದರು : "ಅಲ್ಲಾಹನು ನಿನ್ನನ್ನು ಈ ಒಂಟೆಯ ಮೂಲಕ ಶತ್ರುಗಳಿಂದ

ರಕ್ಷಿಸಿದ್ದನು. ನಿನಗೆ ಉಪಕಾರ ಮಾಡಿದ ಈ ಒಂಟೆಯನ್ನೇ ಬಲಿ ನೀಡುವೆನೆಂದು ಹರಕೆ ಹೊರುವುದು ಅಧರ್ಮವಾಗಿದೆ. ಅಲ್ಲಾಹನು ಇಷ್ಟಪಡದಂತಹ ಅವನಿಗೆ ಅವಿಧೇಯತೆ ತೋರುವಂತಹ ಹರಕೆ ಅಥವಾ ಕಾಣಿಕೆಗಳಿಗೆ ಅಲ್ಲಾಹನ ಬಳಿ ಯಾವುದೇ ಸ್ಥಾನವಿರುವುದಿಲ್ಲ. ನಿನ್ನದಲ್ಲದ ಒಂದು ವಸ್ತುವನ್ನು ಬಲಿದಾನ ಮಾಡುವ ನಿನ್ನ ಹರಕೆಗೆ ಯಾವುದೇ ಬೆಲೆಯಿರುವುದಿಲ್ಲ"❺

ಈ ಎಲ್ಲಾ ಉದಾಹರಣೆಗಳನ್ನು ಮತ್ತು ಸದ್ವರ್ತನೆಯ ಉತ್ಕೃಷ್ಟ ನಮೂನೆಗಳನ್ನು ನಾವು ನಮ್ಮ ಸ್ವಭಾವ ಮತ್ತು ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಬೇಕಾಗಿದೆ. ಮತ್ತು ಮನುಷ್ಯರು, ಪಶು-ಪಕ್ಷಿಗಳು ಮಾತ್ರವಲ್ಲದೆ ಮರಗಳು ಮತ್ತು ಜಡವಸ್ತುಗಳೊಂದಿಗೂ ಕೂಡಾ ಕೋಮಲವಾಗಿ ವರ್ತಿಸಬೇಕಾಗಿದೆ.

ಪ್ರವಾದಿ(ಸ)ರು ಜುಮ್‌ಆದ ಕುತ್ಬಾ ನೀಡುವ ಸಂದರ್ಭದಲ್ಲಿ ಖರ್ಜೂರದ ಮರದ ಕಾಂಡಕ್ಕೆ ಒರಗಿಕೊಳ್ಳುತ್ತಿದ್ದರು. ಅನ್ಸಾರಿಗಳ ಪೈಕಿ ಮಹಿಳೆಯೊಬ್ಬರು ಕೇಳಿದರು, ಅಲ್ಲಾಹನ ಸಂದೇಶವಾಹಕರೆ! ನಾನು ಖುತ್ಬಾ ನಿರ್ವಹಿಸುವಾಗ ನಿಮಗೆ ವಿರಮಿಸಲು ಒಂದು ವಸ್ತುವನ್ನು ಮಾಡಿಕೊಟ್ಟರೆ ಹೇಗೆ? ಪ್ರವಾದಿ(ಸ) ಹೇಳಿದರು, ನೀವು ಬಯಸುವುದಾದರೆ ಹಾಗೇ ಹಾಗಲಿ, ಅವರು ಒಂದು ಮಿಂಬರನ್ನು ನಿರ್ಮಿಸಿ ಕೊಟ್ಟರು. ಜುಮ್‌ಆದ ದಿನ ಬಂತು ಪ್ರವಾದಿ(ಸ) ಮಿಂಬರಿನ ಮೇಲೆ ಬಂದು ಕುಳಿತುಕೊಂಡಾಗ ಖರ್ಜೂರದ ಕಾಂಡವು ಎಮ್ಮೆ ಕೂಗಿದಂತೆ ಕೂಗ ತೊಡಗಿತು. ಅದರ ಶಬ್ದ ಮಸೀದಿಯ ತುಂಬ ಪ್ರತಿಧ್ವನಿಸತೊಡಗಿತು. ನೆಬಿ(ಸ) ಮಿಂಬರಿನಿಂದ ಇಳಿದರು. ಅದನ್ನು ಅಪ್ಪಿಕೊಂಡರು ಮತ್ತು ಸಮಾಧಾನಪಡಿಸಿದರು. ಖರ್ಜೂರದ ಕಾಂಡವು ಮಕ್ಕಳಂತೆ ಒಕ್ಕಳಿಸುತ್ತಿತ್ತು. ಪ್ರವಾದಿ(ಸ) ಮಕ್ಕಳನ್ನು ಸಮಾಧಾನಿಸುವಂತೆ ಅದನ್ನು ಸಮಾಧಾನಪಡಿಸಿದರು. ನಿಧಾನವಾಗಿ ಅದು ಮೌನವಾಯಿತು. ಬಳಿಕ ಪ್ರವಾದಿ(ಸ) ಹೇಳಿದರು, "ಯಾರ ಕೈಯಲ್ಲಿ ಮುಹಮ್ಮದ್(ಸ)ರ ಪ್ರಾಣವಿದೆಯೋ ಅವನ ಮೇಲಾಣೆ! ನಾನು ಅದನ್ನು ಸಮಾಧಾನಪಡಿಸದೆ ಇರುತ್ತಿದ್ದರೆ. ಖಿಯಾಮತ್ತಿನ ತನಕವೂ ಅದು ಅಳುತ್ತಲೇ ಇರುತ್ತಿತ್ತು"

ಸಾರಾಂಶ : **"ಅಲ್ಲಾಹನು ಮನುಷ್ಯನಿಗೆ ಶ್ರೇಷ್ಠತೆಯನ್ನು ದಯಪಾಲಿಸಿದ್ದಾನೆಂಬ ಮಾತ್ರಕ್ಕೆ ಅವನು ಅಲ್ಲಾಹನ ಇತರ ಸೃಷ್ಟಿಗಳ ಮೇಲೆ ಅಕ್ರಮವೆಸಗಬಹುದು ಎಂದರ್ಥವಲ್ಲ."**

❶ ಸುನನು ಅಬೂದಾವೂದ್ (ಹದೀಸ್ 52, 68)

❷ ಸುನನು ಅಬೂದಾವೂದ್ (ಹದೀಸ್ 76)

❸ ಅಲ್ ಮುಸ್ತದ್‌ರಕ್ ಹಾಕಿಮ್ 4/232)

❹ ಸಹೀಹ್ ಇಬ್ನ್ ಖುಝೈಮ 4/142

❺ ಸಹೀಹ್ ಮುಸ್ಲಿಮ್ (ಹದೀಸ್ 1641)

❻ ಸುನನು ದಾರಿಮಿ (ಹದೀಸ್ 42)

# ಅಲ್ಲಾಹನ ಇಷ್ಟ ಸಂಪಾದಿಸಬೇಕೆಂದಿದ್ದರೆ ಹೃದಯವನ್ನು ಸಂಸ್ಕರಿಸಿಕೊಳ್ಳಿರಿ

ನಾನು ಹಲವಾರು ವರ್ಷಗಳಿಂದ ಕೆಲವು ಜನರ ಸಹವಾಸದಲ್ಲಿ ಜೀವಿಸುತ್ತಿದ್ದೇನೆ. ಅದೇ ಪ್ರಕಾರ ಅವರ ನಡೆ-ನುಡಿ ಮಾತು-ಕೃತಿಯನ್ನು ಗಮನಿಸುತ್ತಲೂ ಇದ್ದೇನೆ. ಅವರು ಒಂದು ಔಪಚಾರಿಕ ನೆಲೆಯಲ್ಲಾದರೂ ಯಾರೊಂದಿಗೂ ಮಂದಹಾಸ ಬೀರಿದ್ದಾಗಲಿ, ನಗಾಡಿದ್ದಾಗಲಿ ನನಗೆ ನೆನಪಿಲ್ಲ. ಅವರ ಪ್ರಕೃತಿಯೇ ಹಾಗೆ, ಬಹುಷಃ ಅವರಿಗೂ ಅದನ್ನು ಬದಲಾಯಿಸಲು ಸಾಧ್ಯವಿಲ್ಲವೇನೋ ಎಂದು ಕೊಂಡಿದ್ದೆ. ಆದರೆ, ಇತ್ತೀಚೆಗೆ ನಾನು ಕೆಲವು ವಿಶೇಷ ಸ್ಥಳ ಮತ್ತು ಸಂದರ್ಭಗಳಲ್ಲಿ ಅವರು ಕೆಲವು ಪ್ರಮುಖರೊಂದಿಗೆ- ಪ್ರತ್ಯೇಕವಾಗಿ ಹೇಳಬೇಕೆಂದರೆ, ಬೃಹತ್ ಶ್ರೀಮಂತ ಕುಳಗಳೊಂದಿಗೆ ನಸುನಗುತ್ತಾ ಮಾತಾಡುವುದನ್ನೂ, ನಗೆಹಣಿಗಳನ್ನು ಚೆಲ್ಲುತ್ತಿರುವುದನ್ನೂ ಕಂಡೆ. ಆಗಲೇ ನನಗೆ ಮನವರಿಕೆ ಯಾಗಿದ್ದು ಅವರು ಇಂತಹಾ ಚಿತೋಹಾರಿ ಪ್ರವೃತ್ತಿಯನ್ನು ಸ್ವಂತ ತಾತ್ಪರ್ಯ ಮತ್ತು ಸ್ವಾರ್ಥ ಸಾಧನೆಗಾಗಿ ಮಾತ್ರ ಪ್ರಕಟಿಸುತ್ತಾರೆ ಎಂದು. ವಾಸ್ತವದಲ್ಲಿ ಅವರ ಈ ಪ್ರವೃತ್ತಿಯಿಂದ ಅವರು ಅಲ್ಲಾಹನ ಬಳಿ ಅವನ ಔದಾರ್ಯಗಳಿಂದ ವಂಚಿತರಾಗುತ್ತಾರೆ.

ಸತ್ಯವಿಶ್ವಾಸಿ ಅಥವಾ ಧರ್ಮನಿಷ್ಟನಾದ ವ್ಯಕ್ತಿ ಅಲ್ಲಾಹನ ಸಂತೃಪ್ತಿಯನ್ನು ಬಯಸಿಕೊಂಡು ಎಲ್ಲರೊಂದಿಗೂ ಒಂದೇ ರೀತಿಯಲ್ಲಿ ಸದ್ವರ್ತನೆಯನ್ನು ತೋರುತ್ತಾನೆ. ಅವನ ಈ ಪ್ರವೃತ್ತಿ ಯಾವುದೇ ಲೌಕಿಕ ತಾತ್ಪರ್ಯ ಅಥವಾ ಸಾಂಧರ್ಬಿಕ ಲಾಭದ ಉದ್ದೇಶವನ್ನೂ ಹೊಂದಿರುವುದಿಲ್ಲ. ಅವನು ಶ್ರೀಮಂತರೊಂದಿಗೆ ಹೇಗೆ ವರ್ತಿಸುತ್ತಾನೋ ಬಡವರೊಂದಿಗೂ ಹಾಗೇ ವರ್ತಿಸುತ್ತಾನೆ. ಬೀದಿಯನ್ನು ಗುಡಿಸುವ ಜಾಡಮಾಲಿಯೊಂದಿಗೂ, ಉನ್ನತ ಸ್ಥರದ ಅಧಿಕಾರಿಗಳೊಂದಿಗೂ ಅವನ ನಡವಳಿಕೆ ಒಂದೇ ರೀತಿಯಾಗಿದ್ದಾಗಿರುತ್ತದೆ.

ಈ ಕುರಿತಾಗಿ ಅಲ್ಲಾಹನ ಸಂದೇಶವಾಹಕರಾದ ಮುಹಮ್ಮದ್(ಸ) ರವರ ಮಾದರಿಯು ನಮ್ಮ ಮುಂದಿದೆ. ಇಸ್ಲಾಮ್ ಮನುಷ್ಯರೆಂಬ ನೆಲೆಯಲ್ಲಿ ಎಲ್ಲಾ ಜನರೂ ಸಮಾನ ರೀತಿಯಲ್ಲಿ ಗೌರವಕ್ಕೆ ಪಾತ್ರರಾಗುತ್ತಾರೆಂದು ಕಲಿಸುತ್ತದೆ. ಇತರ ಎಲ್ಲಾ ಧರ್ಮಗಳಿಗಿಂತ ವ್ಯತಿರಿಕ್ತವಾಗಿ ನಿಲ್ಲುವ ಇಸ್ಲಾಮ್‌ನ ಸಮಾನತೆಯ ಪರಿಕಲ್ಪನೆಯು ಧರ್ಮ, ಜಾತಿ, ವರ್ಗ, ವರ್ಣ, ಭಾಷೆಯ ಹೆಸರಲ್ಲಿ ಹರಿದು ಹಂಚಿ ಹೋಗಿರುವ ಜಗತ್ತಿನಲ್ಲಿ ಶೋಭಾಯಮಾನವಾಗಿ ಕಂಗೊಳಿಸುತ್ತದೆ.

ಪ್ರವಾದಿ ಹೇಳುತ್ತಾರೆ,

«إِنَّ مِنْ أَحَبِّكُمْ إِلَيَّ وَ أَقْرَبِكُمْ مِّنِّي مَجْلِسًا يَّوْمَ الْقِيَامَةِ أَحَاسِنُكُمْ أَخْلَاقًا»

**"ಅಂತಿಮ ದಿನ ನನ್ನ ಪ್ರೀತಿ ಪಾತ್ರರು ಮತ್ತು ಆಪ್ತರಲ್ಲಿ ನಿಮ್ಮ ಪೈಕಿ ಅತ್ಯುತ್ತಮ ಸ್ವಭಾವವಂತರು ಒಳಪಟ್ಟಿರುತ್ತಾರೆ."** ❶

ಅಬ್ದುಲ್ ಖೈಸ್ ಗೋತ್ರದ ಒಬ್ಬ ಗಾಯಾಳುವಿನೊಂದಿಗೆ ಪ್ರವಾದಿ (ಸ) ಹೇಳಿದರು,

"ನಿಮ್ಮೊಂದಿಗೆ ಅಲ್ಲಾಹು ಮತ್ತು ಅವನ ಸಂದೇಶವಾಹಕರು ಇಷ್ಟಪಡುವಂತಹಾ ಎರಡು ಸಂಗತಿಗಳಿವೆ"

ಆ ಎರಡು ಸಂಗತಿಗಳು ಯಾವುದು? ಇರುಳಿನಲ್ಲಿ ನಮಾಝ್ ಮತ್ತು ಹಗಲಿನಲ್ಲಿ ಉಪವಾಸವೇ? ಖಂಡಿತ ಅಲ್ಲ!

ಆ ವ್ಯಕ್ತಿ ಬಹಳ ಕುತೂಹಲದಿಂದ ಕೇಳಿದರು "ಅಲ್ಲಾಹನ ಸಂದೇಶ ವಾಹಕರೇ! ಆ ಎರಡು ಸಂಗತಿಗಳು ಯಾವುದು?"

ಪ್ರವಾದಿ (ಸ) ಹೇಳಿದರು,

"ಶಿಸ್ತು ಮತ್ತು ಸೌಜನ್ಯತೆ"❷

ಪ್ರವಾದಿ (ಸ) ರೊಂದಿಗೆ "ಪುಣ್ಯ"ದ ಕುರಿತು ವಿಚಾರಿಸಲಾದಾಗ ಅವರು ಹೇಳಿದರು,

«اَلْبِرُّ حُسْنُ الْخُلُقِ»

**"ಪುಣ್ಯವೆಂದರೆ ಸುಸ್ವಭಾವ (ಸದ್ವರ್ತನೆ) ಯ ಹೆಸರೇ ಆಗಿದೆ"❸**

ಪ್ರವಾದಿ (ಸ) ರೊಂದಿಗೆ ಕೇಳಲಾಯಿತು,

ಸ್ವರ್ಗಕ್ಕೆ ಹೋಗುವವರಲ್ಲಿ ಹೆಚ್ಚಿನವರ ವಿಶೇಷತೆಗಳೇನಾಗಿರುವುದು?

ಪ್ರವಾದಿ (ಸ) ಹೇಳಿದರು,

«تَقْوَى اللّٰهِ وَحُسْنُ الْخُلُقِ»

**“ಅಲ್ಲಾಹನ ಭಯ (ತಖ್ವಾ) ಮತ್ತು ಸುಸ್ವಭಾವ” ❹**

ಪ್ರವಾದಿ (ಸ) ಹೇಳಿದರು,

**«أَكْمَلُ الْمُؤْمِنِينَ إِيمَانًا أَحَاسِنُهُمْ أَخْلَاقًا الْمُوَطَّؤُونَ أَكْنَافًا الَّذِينَ يَأْلَفُونَ وَ يُؤْلَفُونَ، وَلَا خَيْرَ فِيمَنْ لَّا يَأْلَفُ وَلَا يُولَفُ»**

**“ಸತ್ಯ ವಿಶ್ವಾಸಿಗಳಲ್ಲಿ ವಿಶ್ವಾಸ ಪರಿಪೂರ್ಣರಾದವರು ಅತ್ಯುತ್ತಮ ಸ್ವಭಾವವಂತರಾಗಿರುತ್ತಾರೆ. ಅವರು ಮೃದು ಧೋರಣೆ ಯವರೂ ಆಗಿರುತ್ತಾರೆ. ಅವರು ಇತರರ ಮೆಚ್ಚಿಗೆ ಪಡೆಯುತ್ತಾರೆ ಮತ್ತು ಸ್ವತಹಾ ಇತರರನ್ನು ಮೆಚ್ಚುತ್ತಾರೆ. ಇತರರಿಗೆ ಒಲಿಯದ ಮತ್ತು ಇತರರನ್ನು ಒಲಿಸದ ವ್ಯಕ್ತಿಯಲ್ಲಿ ಯಾವುದೇ ಒಳಿತಿಲ್ಲ.”❺**

ಪ್ರವಾದಿ (ಸ) ಹೇಳಿದರು,

«مَا مِنْ شَيْءٍ أَثْقَلَ فِي الْمِيزَانِ مِنْ حُسْنِ الْخُلُقِ»

**"ಮೀಝಾನ್‌ನಲ್ಲಿ ಶ್ರೇಷ್ಠ ಸ್ವಭಾವಕ್ಕಿಂತ ಭಾರ ತೂಗುವ ವಸ್ತು ಇರಲಾರದು"❻**

ಪ್ರವಾದಿ (ಸ) ಹೇಳಿದರು,

«إِنَّ الرَّجُلَ لَيَبْلُغُ بِحُسْنِ خُلُقِهِ دَرَجَةَ قَائِمِ اللَّيْلِ وَ صَائِمِ النَّهَارِ»

**"ವ್ಯಕ್ತಿಯು ಸ್ವಭಾವವಂತರಾಗಿದ್ದರೆ ಅವನು ಆ ಮೂಲಕ ಹಗಲಲ್ಲಿ ಉಪವಾಸ ಅನುಷ್ಠಿಸುವ ಇರುಳಲ್ಲಿ ನಮಾಝ್ ನಿರ್ವಹಿಸುವ ಶ್ರೇಷ್ಠತೆಯನ್ನು ಸಂಪಾದಿಸುತ್ತಾನೆ"❼**

ಒಂದು ದಿನ ಉಮ್ಮು ಸಲಮ (ರ) ಪ್ರವಾದಿ (ಸ)ರೊಂದಿಗೆ ಕುಳಿತುಕೊಂಡು ಪರಲೋಕ ಮತ್ತು ಪರಲೋಕದಲ್ಲಿ ಅಲ್ಲಾಹನು ಸಿದ್ಧಗೊಳಿಸಿಟ್ಟಿರುವ ಅನುಗ್ರಹಗಳ ಕುರಿತು ಸ್ಮರಿಸಿಕೊಳ್ಳುತ್ತಿದ್ದರು. ಉಮ್ಮುಲ್ ಮುಅಮಿನೀನ್ (ರ) ವಿಚಾರಿಸಿದರು "ಅಲ್ಲಾಹ್‌ನ ಸಂದೇಶವಾಹಕರೇ! ಒಬ್ಬಳಿಗೆ ಈ ಲೋಕದಲ್ಲಿ ಇಬ್ಬರು ಪತಿಯಂದಿರಿದ್ದು ಅವಳು ಮತ್ತು ಅವಳ ಪತಿಯಂದಿರಿಬ್ಬರು ಸ್ವರ್ಗಕ್ಕೆ ಹೋದರೆ ಅಲ್ಲಿ ಅವಳು ಇಬ್ಬರು ಪತಿಯಂದಿರ ಪೈಕಿ ಯಾರಿಗೆ ಲಭಿಸುತ್ತಾಳೆ"

ಪ್ರವಾದಿ (ಸ) ಹೇಳಿದರು,

"ಅವರಿಬ್ಬರಲ್ಲಿ ಯಾರ ಸ್ವಭಾವವು ಶ್ರೇಷ್ಠವಾಗಿರುವುದೊ ಅವಳು ಅವನಿಗೆ ಲಭಿಸುವಳು" ಈ ಬಗ್ಗೆ ಉಮ್ಮು ಸಲಮ (ರ) ರಿಗೆ ಆಶ್ಚರ್ಯವೆನಿಸಿತು. ಪ್ರವಾದಿ (ಸ) ಅದನ್ನು ಅರ್ಥೈಸಿಕೊಂಡು ಹೇಳಿದರು,

"ಉಮ್ಮು ಸಲಮ, ಈ ಲೋಕ ಮತ್ತು ಪರಲೋಕದಲ್ಲಿ ಸುಸ್ವಭಾವಕ್ಕೆ ಶ್ರೇಷ್ಠತೆ ಇದೆ"❽

ಹೌದು ! ಈ ಲೋಕ ಮತ್ತು ಪರಲೋಕದಲ್ಲಿ ಶ್ರೇಷ್ಠತೆ!

ಮನುಷ್ಯನ ಸುಸ್ವಭಾವ - ಸೌಜನ್ಯತೆಯನ್ನು ಕಂಡು ಜನರು ಅವನನ್ನು ಇಷ್ಟ ಪಡುವುದು ಅವನನ್ನು ಪ್ರೀತಿಸುವುದು ಲೋಕದಲ್ಲಿ ಅದಕ್ಕೆ ಲಭಿಸುವ ಶ್ರೇಷ್ಠತೆಯಾಗಿದೆ. ಇನ್ನು ಪರಲೋಕದಲ್ಲಿ ಲಭಿಸುವ ಶ್ರೇಷ್ಠತೆಯ ಉದ್ದೇಶವು ಶ್ರೇಷ್ಠ ಪ್ರತಿಫಲವಾಗಿದೆ. ಮನುಷ್ಯನಲ್ಲಿ ಅದೆಷ್ಟೇ ಆರಾಧನಾ ಕರ್ಮವಿರಲಿ ಸ್ವಭಾವ ಮತ್ತು ಸೌಜನ್ಯತೆ ಇಲ್ಲವೆಂದರೆ ಅದೆಲ್ಲವೂ ವ್ಯರ್ಥವಾಗಿ ಬಿಡುವುದು.

ಪ್ರವಾದಿ (ಸ) ರವರ ಮುಂದೆ ಒಂದು ಸ್ತ್ರೀಯ ಕುರಿತು ಪ್ರಸ್ತಾಪಿಸಲಾಯಿತು. ಅವಳು ನಮಾಝ್ ನಿರ್ವಹಿಸುತ್ತಾಳೆಂದೂ, ಉಪವಾಸ ಅನುಷ್ಠಿಸುತ್ತಾಳೆಂದೂ, ದಾನ-ಧರ್ಮಗಳನ್ನು ನೀಡುತ್ತಾಳೆಂದೂ, ಪುಣ್ಯ ಕಾರ್ಯಗಳಲ್ಲೆಲ್ಲಾ ಉತ್ಸಾಹ ತೋರುತ್ತಾಳೆಂದೂ ಹೇಳಲಾಯಿತು. ಆದರೆ ಅವಳು ನೆರೆಹೊರೆಯವರೊಂದಿಗೆ ಬಾಜಾರಿಯಂತೆ ವರ್ತಿಸುತ್ತಾಳೆಂದೂ ಹೇಳಲಾಯಿತು. ಪ್ರವಾದಿ (ಸ) ಅವಳ ಕುರಿತಾಗಿ ಹೇಳಿದರು,

"ಅವಳು ಭೆಂಕಿಯ ಪಾಲಾಗುತ್ತಾಳೆ"❾

ಸ್ವಭಾವ ಮತ್ತು ಸದ್ವರ್ತನೆಗೆ ನಮ್ಮ ಪ್ರವಾದಿ ಮುಹಮ್ಮದ್ (ಸ) ರವರು ನಮಗೆ ಆದರ್ಶವೂ ಮಾದರಿಯೂ ಆಗಿದ್ದಾರೆ.

ಅವರು ಎಲ್ಲರಿಗಿಂತ ಗೌರವಸ್ಥರೂ, ಆದರಣೀಯರೂ, ಆಕರ್ಷಕ ವ್ಯಕ್ತಿತ್ವವಿರುವವರೂ ಆಗಿದ್ದರು. ಅವರು ಸಂಪೂರ್ಣವಾಗಿ ಪರ್ದಾ ಧರಿಸುವ ಸ್ತ್ರೀಯರಿಗಿಂತಲೂ ಹೆಚ್ಚು ನಾಚಿಕೆ, ಲಜ್ಜೆ ಇರುವವರಾಗಿದ್ದರು. ಅವರು ಸತ್ಯ ಸಂಧರೂ - ಪ್ರಾಮಾಣಿಕರೂ ಆಗಿದ್ದರು. ಈ ಬಗ್ಗೆ ಅವರ ವಿರೋಧಿಗಳಾದ ಸತ್ಯ ನಿಷೇಧಿಗಳಿಗೆ ಕೂಡಾ ಒಮ್ಮತಾಭಿಪ್ರಾಯವಿತ್ತು. ಪ್ರವಾದಿ (ಸ)ರಿಗೆ ಪ್ರಪ್ರಥಮ ದೇವ ವಚನ ಅವತೀರ್ಣ ವಾದ ಸಂದರ್ಭದಲ್ಲಿ ಅವರಲ್ಲಿ ಭಯ, ಭೀತಿ, ಆಘಾತಗಳುಂಟಾದಾಗ ಅವರನ್ನು ಸಮಾಧಾನ ಪಡಿಸುತ್ತಾ ಖದೀಜ (ರ) ಹೇಳಿದ ಮಾತು,

ಅಲ್ಲಾಹನಾಣೆ! ಅಲ್ಲಾಹುವೆಂದೂ ನಿಮ್ಮನ್ನು ನಾಶಕ್ಕೀಡು ಮಾಡಲಾರ (ಏಕೆ?) ನೀವು ಸಂಬಂಧಗಳನ್ನು ಜೋಡಿಸುತ್ತೀರಿ. ಅನಾಥರ ಸಂರಕ್ಷಣೆಯ ಹೊರೆ ಹೊರುತ್ತೀರಿ. ನೀವು ಸಂಪಾದಿಸಿದ್ದನ್ನು ಬಡವರಿಗಾಗಿ - ನಿರ್ಗತಿಕರಿಗಾಗಿ ವ್ಯಯಿಸುತ್ತೀರಿ. ಅತಿಥಿಗಳನ್ನೂ ತತ್ಕರಿಸುತ್ತೀರಿ. ಹಿರಿಯರನ್ನು ಆಧರಿಸುತ್ತೀರಿ. ಸತ್ಯವನ್ನೇ ನುಡಿಯುತ್ತೀರಿ. ವಿಶ್ವಾಸಕ್ಕೆ ದ್ರೋಹ ಬಗೆಯುವುದಿಲ್ಲ. ❿

ಅಲ್ಲಾಹನು ಪರಿಶುದ್ಧ ಕುರ್‌ಆನ್‌ನಲ್ಲಿ ಪ್ರವಾದಿ (ಸ) ರವರ ಕುರಿತು ಪ್ರಶಂಸಿಸುತ್ತಾ ಹೇಳಿದ ಮಾತುಗಳನ್ನು ಜನರು ಅಂತಿಮ ದಿನದ ತನಕವೂ ಪಠಿಸುತ್ತಾ ಇರುವರು. ಅಲ್ಲಾಹು ಹೇಳುತ್ತಾನೆ.

وَإِنَّكَ لَعَلَىٰ خُلُقٍ عَظِيمٍ ○ **"ನಿಶ್ಚಯವಾಗಿಯೂ ನೀವು ಅತ್ಯುತ್ಕೃಷ್ಟ ಸ್ವಭಾವವಂತರೇ ಆಗಿದ್ದೀರಿ."** ⓫

ಅವರ ಸ್ವಭಾವವು ಪವಿತ್ರ ಕುರ್‌ಆನೇ ಆಗಿತ್ತು. ನಿಶ್ಚಯವಾಗಿಯೂ ಅವರ ನಡೆ-ನುಡಿಗಳೆಲ್ಲವೂ ಕುರ್‌ಆನಿನ ಪಡಿಯಚ್ಚು ಮಾತ್ರವಾಗಿತ್ತು. ಅವರಿಗೆ ಈ ವಚನ ಅವತೀರ್ಣವಾದಾಗ

وَأَحْسِنُوٓا۟ ۛ إِنَّ ٱللَّهَ يُحِبُّ ٱلْمُحْسِنِينَ ○

**"ಸೌಜನ್ಯ ತೋರಿರಿ. ಏಕೆಂದರೆ ಅಲ್ಲಾಹು ಸಜ್ಜನರನ್ನು ಪ್ರೀತಿಸುತ್ತಾನೆ."** ⓬

ಅವರು ಎಚ್ಚೆತ್ತು ಕೊಂಡರು. ಬಡವರು, ಶ್ರೀಮಂತರು, ಸಾಮಾನ್ಯರು ಅಸಾಮಾನ್ಯರು ಎಲ್ಲರೊಂದಿಗೂ ಅತ್ಯುತ್ತಮವಾಗಿ ವರ್ತಿಸಿದರು. ಅಲ್ಲಾಹನಿಂದ ಈ ಮಾತು ಕೇಳಿದಾಗ,

فَٱعْفُوا۟ وَٱصْفَحُوا۟

**"ನೀವು ಕ್ಷಮಿಸಿರಿ ಮತ್ತು ಅಲಕ್ಷಿಸಿರಿ"** ⓭

ಅವರು ಕ್ಷಮಿಸಿದರು ಮತ್ತು ಶತ್ರುಗಳ ಉಪದ್ರವಗಳನ್ನು ಅಲಕ್ಷಿಸುತ್ತಾ ಕಾರ್ಯ ಪ್ರವರ್ತರಾದರು. ಕಿವಿಗಳಿಗೆ ಅಲ್ಲಾಹ್‌ನ ಈ ವಚನ ತಲುಪಿದಾಗ,

وَقُولُوا۟ لِلنَّاسِ حُسْنًا

**"ಜನರೊಂದಿಗೆ ಒಳ್ಳೆಯ ಮಾತುಗಳನ್ನಾಡಿರಿ"** ⓮

ಅವರು ಜನರೊಂದಿಗೆ ಮಾತನಾಡುವಾಗ ಅತ್ಯುತ್ತಮ ಪದಗಳನ್ನು ಬಳಸಲು ಪ್ರಾರಂಭಿಸಿದರು.

ಪ್ರವಾದಿ (ಸ) ರವರು ನಮ್ಮ ಮಾರ್ಗದರ್ಶಕರಾಗಿದ್ದಾರೆ. ಅವರು ತೋರಿದ ದಾರಿಯೇ ನಮ್ಮ ಮಟ್ಟಿಗೆ ಅಂಗೀಕಾರಾರ್ಹವಾದುದಾಗಿದೆ.

ಪ್ರವಾದಿ(ಸ) ತನ್ನ ಸಂಪೂರ್ಣ ಜೀವನವನ್ನು ಜನರ ಒಳಿತಿಗಾಗಿ ಮತ್ತು ಜನರ ಸಂಸ್ಕರಣೆಗಾಗಿ

ವ್ಯಯಿಸಿದರು. ಅವರು ಅಲ್ಲಾಹನ ವಚನವನ್ನು ಜನರಿಗೆ ತಲುಪಿಸುವ ನಿಟ್ಟಿನಲ್ಲಿ ನಿರಂತರ ಪರಿಶ್ರಮಿಸಿದರು. ಬಿಸಿಲಿನ ಧಗೆಯನ್ನೋ ಇರುಳಿನ ಕಾರ್ಗತ್ತಲನ್ನೋ ಅವರು ಲೆಕ್ಕಿಸಲಿಲ್ಲ. ಜನರಿಂದ ಎದುರಾದ ಹಿಂಸೆ ಮತ್ತು ದೌರ್ಜನ್ಯಗಳನ್ನು ಅವರು ಸಹಿಸಿದರು. ಎಲ್ಲಾ ರೀತಿಯ ಸುಖ-ಸಂತೋಷಗಳನ್ನೂ ತ್ಯಜಿಸಿದರು. ಅವರು ಸದಾ ಕಾರ್ಯತತ್ಪರರಾಗಿರುತ್ತಿದ್ದರು. ಸುಸ್ತು ಅಥವಾ ಆಲಸ್ಯವೆನ್ನುವ ಪದವೇ ಅವರಿಗೆ ತಿಳಿದಿರಲಿಲ್ಲ. ಸಂಪೂರ್ಣ ಜೀವನಾವಧಿಯನ್ನು ಕ್ರಿಯಾಶೀಲರಾಗಿಯೇ ಕಳೆದರು. ಅವರ ಮೂಳೆಗಳಿಗೆ ಮುಪ್ಪು ಆವರಿಸಿದರೂ ಅವರು ಉತ್ಸಾಹ ಕುಂದಲಿಲ್ಲ. ಉಮ್ಮುಲ್ ಮುಅಮಿನೀನ್ ಆಯಿಶ(ರ) ಪ್ರವಾದಿ (ಸ) ರವರ ವೃದ್ಧ ಶರೀರವನ್ನೂ ವಿವರಿಸುತ್ತಾ ಹೇಳುತ್ತಾರೆ,

"ಕೆಲವು ಪ್ರವಾದಿಗಳು ಕುಳಿತುಕೊಂಡು ನಮಾಝ್ ನಿರ್ವಹಿಸುತ್ತಿದ್ದರೆಂಬ ವಿಷಯವನ್ನೂ ನಾನು ಕೇಳಿದ್ದೇನೆ" (15)

وَإِذَا كَانَتِ النُّفُوسُ كِبَارًا     تَعِبَتْ فِي مُرَادِهَا الْأَجْسَامُ

**"ಆತ್ಮವು ಉನ್ನತವಾಗಿದ್ದರೆ ಆ ಔನ್ನತ್ಯವನ್ನು ಪಡೆಯಲು ದೇಹವು ಕಠಿಣ ಪರಿಶ್ರಮ ಪಡಬೇಕಾಗುತ್ತದೆ."**

ಅತ್ಯುತ್ತಮ ಸ್ವಭಾವವನ್ನು ಅಳವಡಿಸಿಕೊಂಡು ಅದರಲ್ಲಿ ಸ್ಥಿರವಾಗಿರುವ ಇಚ್ಛೆಯಿಂದ ಪ್ರವಾದಿ ವರ್ಯ(ಸ)ರು ಅಲ್ಲಾಹನೊಂದಿಗೆ ಹೇಗೆ ಪ್ರಾರ್ಥಿಸುತ್ತಿದ್ದರು.

«اللَّهُمَّ كَمَا أَحْسَنْتَ خَلْقِي فَأَحْسِنْ خُلُقِي»

**"ಆರಾಧ್ಯನೇ! ಹೇಗೆ ನೀನು ನನಗೆ ಅತ್ಯುತ್ತಮ ಚಹರೆಯನ್ನು ಕೊಟ್ಟಿದ್ದಿಯೊ ಹಾಗೆ ನೀನು ನನಗೆ ಅತ್ಯುತ್ತಮ ಚರ್ಯೆಯನ್ನೂ ದಯಪಾಲಿಸು"** (16)

ಪ್ರವಾದಿ (ಸ) ಹೀಗೂ ಪ್ರಾರ್ಥಿಸುತ್ತಿದ್ದರು.

«اللَّهُمَّ اهْدِنِي لِأَحْسَنِ الْأَخْلَاقِ لَا يَهْدِي لِأَحْسَنِهَا إِلَّا أَنْتَ،
وَاصْرِفْ عَنِّي سَيِّئَهَا لَا يَصْرِفُ عَنِّي سَيِّئَهَا إِلَّا أَنْتَ»

**"ಆರಾಧ್ಯನೇ! ನೀನು ನನಗೆ ಅತ್ಯುತ್ತಮ ಸ್ವಭಾವವನ್ನು ದಯಪಾಲಿಸು. ನೀನಲ್ಲದೆ ಯಾರೂ ಸ್ವಭಾವವನ್ನು ಶ್ರೇಷ್ಠಗೊಳಿಸಲಾರರು. ನನ್ನಿಂದ ದುಸ್ವಭಾವವನ್ನು ದೂರೀಕರಿಸು. ಅದನ್ನು ನೀನೇ ನನ್ನಿಂದ ದೂರೀಕರಿಸ ಬಲ್ಲೆ"** (17)

ಇಸ್ಲಾಮಿನ ಸಂದೇಶ ಪ್ರಚಾರದ ಹಾದಿಯಲ್ಲಿ ನಾವು ಅಲ್ಲಾಹನ ಸಂದೇಶವಾಹಕರ ಅದ್ವಿತೀಯ ಸ್ವಭಾವವನ್ನು ನೆಚ್ಚಿಕೊಳ್ಳಬೇಕಾದ ಅವಶ್ಯಕತೆ ಇದೆ. ಇಸ್ಲಾಮಿನ ಕುರಿತು ಅರಿವಿಲ್ಲದ ಜನರು ಆ ಶುದ್ಧ ಸ್ಫಟಿಕದಂತಹಾ ಸ್ವಭಾವದಿಂದ ಆಕರ್ಷಿತರಾಗಿ ಇಸ್ಲಾಮಿ ಚೌಕಟ್ಟಿನೊಳಗೆ ಬಂದು ಸೇರಲೂ ಬಹುದು.

**ಉಪಸಂಹಾರ**

**"ಉದ್ದೇಶ ಸರಿಯಾಗಿದ್ದರೆ ಜನರೊಂದಿಗೆ ನೀವು ತೋರುವ ಸದ್ವರ್ತನೆಯು "ಇಬಾದತ್"ನ ಸ್ಥಾನವನ್ನು ಪಡೆಯುವುದು."**


❶ ಜಾಮಿಉತಿರ್ಮುದಿ 2018

❷ ಸಹೀಹ್ ಮುಸ್ಲಿಮ್ 18

❸ ಸಹೀಹ್ ಮುಸ್ಲಿಮ್ 2553

❹ ಜಾಮಿಅ ತಿರ್ಮುದಿ 2004

❺ ಸಿಲ್‌ಸಿಲತು ಸ್ಸಹೀಹ್ 2/378 ಹದೀಸ್ 751

❻ ಸುನನು ಅಬೂದಾವೂದ್ 4799

❼ ಸುನನು ಅಬೂದಾವೂದ್ 2/379

❽ ಮುಜಲ್ಮುರ್ಝ್ಝವಾ ಇದ್ 10/419, ಹದೀಸ್ 18755

❾ ಮುಸ್ನದ್ ಅಹ್ಮದ್ 2/440

❿ ಸಹೀಹ್ ಬುಖಾರಿ 3

⓫ ಅಲ್‌ಕಲಮ್ 68/4

⓬ ಬಕರ 2/195

⓭ ಬಕರ 2/109

⓮ ಬಕರ 2/83

⓯ ಸಹೀಹ್ ಮುಸ್ಲಿಮು 731

⓰ ಮುಸ್ನದ್ ಅಹ್ಮದ್ 1/403, 6/68, 155

⓱ ಸಹೀಹ್ ಮುಸ್ಲಿಮ್ 771




# ನಿಮಗೆ ಅತ್ಯಂತ ಪ್ರೀತಿಪಾತ್ರರು ಯಾರು?

ಜನರೊಂದಿಗೆ ಉತ್ತಮ ನಡವಳಿಕೆಯನ್ನು ಪ್ರಕಟಿಸುತ್ತಾ ಹೋದಂತೆ ನಿಮ್ಮ ಚಾರಿತ್ರ್ಯವು ಸ್ವಚ್ಛವೂ-ಸ್ಫುಟವೂ ಆಗುವುದು. ನೀವು ಒಬ್ಬನೊಂದಿಗೆ ನಡೆದುಕೊಳ್ಳುವ ರೀತಿ ಮತ್ತು ರಿವಾಜು ಆತನಲ್ಲಿ ತಾನು ಈ ವ್ಯಕ್ತಿಗೆ ಅತ್ಯಂತ ಪ್ರೀತಿ ಪಾತ್ರನೆಂಬ ಅಭಿಪ್ರಾಯವನ್ನು ಹುಟ್ಟಿಸುವಂತಿರಬೇಕು. ನೀವು ನಿಮ್ಮ ತಾಯಿಯೊಂದಿಗೆ ತೋರ್ಪಡಿಸುವ ಪ್ರೀತಿ, ವಿನಯ, ಆದರಾಭಿಮಾನಗಳು ಆಕೆಯು ಇದು ತನಗೆ ಮಾತ್ರ ಮೀಸಲೆಂದು ತಿಳಿದುಕೊಳ್ಳುವಷ್ಟು ಪ್ರಾಮಾಣಿಕವಾಗಿರಬೇಕು.

ನಿಮ್ಮ ತಂದೆ, ಪತ್ನಿ, ಮಕ್ಕಳು ಮತ್ತು ನಿಮ್ಮ ಸಹಜೀವಿಗಳೊಂದಿಗೂ ಇದೇ ರೀತಿಯ ಸದ್ವರ್ತನೆಯನ್ನು ಅಳವಡಿಸಿಕೊಳ್ಳಬೇಕು. ಯಾವಾಗಲೊ ಒಮ್ಮೆ ಕಾಣುವ ಅಂಗಡಿಯವರು, ಗ್ಯಾಸ್ ಸರಬರಾಜು ಮಾಡುವವರು ಮತ್ತು ಇನ್ನಿತರರೊಂದಿಗೆ ನಿಮ್ಮ ವರ್ತನೆ-ನಡವಳಿಕೆ ಮನಮೋಹಕವಾಗಿರಬೇಕು. ಈ ಎಲ್ಲರೂ 'ಅವರು ತಮಗೆ ಅತ್ಯಂತ ಪ್ರೀತಿ ಪಾತ್ರರು' ಎಂದು ತಿಳಿದುಕೊಳ್ಳುಂತಾಗಬೇಕಾದರೆ ನೀವು ಅವರೊಂದಿಗೆ ತೋರುವ ವರ್ತನೆಯು ಅವರ ಮಟ್ಟಿಗೆ ಅತ್ಯಂತ ಆಹ್ಲಾದಕರವಾಗಿರಬೇಕು.

ಇಂತಹಾ ಉತ್ಕೃಷ್ಟ ನಡವಳಿಕೆ ಮತ್ತು ಸ್ವಭಾವಕ್ಕೆ ಅಲ್ಲಾಹನ ಅಂತಿಮ ಸಂದೇಶವಾಹಕರಾದ ಮುಹಮ್ಮದ್ (ಸ)ರವರು ಶ್ರೇಷ್ಠ ಉದಾಹರಣೆಯಾಗಿದ್ದಾರೆ. ಯಾರು ಅವರ ಕುರಿತಾದ ಚರಿತ್ರೆಯ ಪುಟಗಳನ್ನು ಅವಲೋಕಿಸುತ್ತಾರೊ ಅವರಿಗೆ ಇದನ್ನು ಸತ್ಯವೆಂದು ಮನಗಾಣಲು ವಿಳಂಬವಾಗದು. ಅವರ ಆಹ್ಲಾದಕರವಾದ ಸ್ವಭಾವವು ಅನುಕರಣಾರ್ಹವಾಗಿತ್ತು. ಅವರನ್ನು ಸಂಧಿಸುವ ಪ್ರತಿಯೊಬ್ಬರನ್ನು ಅವರು ಗೌರವ ಪೂರ್ವಕವಾಗಿ ಕಾಣುತ್ತಿದ್ದರು. ಅವರಿಗೆ ಪ್ರಾಧಾನ್ಯತೆಯನ್ನು ಕಲ್ಪಿಸುತ್ತಿದ್ದರು. ಅವರನ್ನು ಆಕರ್ಷಿಸಲು, ಅವರಲ್ಲಿ ತನ್ನ ಪ್ರಭಾವವನ್ನುಂಟುಮಾಡಲು ಪ್ರಯತ್ನಿಸುತ್ತಿದ್ದರು. ಅವರೊಂದಿಗೆ ವಿನಯ ಪೂರ್ವಕ ಮತ್ತು ಪೂರ್ಣ ಲಕ್ಷ್ಯವಹಿಸಿ ಮಾತಾಡುತ್ತಿದ್ದರು. ಪ್ರವಾದಿ (ಸ)ರವರು ಯಾರನ್ನು ಕಂಡು ವ್ಯವಹರಿಸುತ್ತಾರೊ ಅವರು ಪ್ರವಾದಿ (ಸ)ಇತರರೆಲ್ಲರಿಗಿಂತ ನನ್ನನ್ನೇ ಹೆಚ್ಚು ಇಷ್ಟ ಪಡುತ್ತಾರೆಂದು ಭಾವಿಸುತ್ತಿದ್ದರು. ಇದರ ಪರಿಣಾಮವೆಂಬಂತೆ ಅವರು ಕೂಡಾ ಪ್ರವಾದಿ(ಸ) ರವರನ್ನು ಸರ್ವರಿಗಿಂತ ಹೆಚ್ಚಾಗಿ ಇಷ್ಟಪಡುತ್ತಿದ್ದರು. ಏಕೆಂದರೆ, ಪ್ರವಾದಿ (ಸ) ತನ್ನ ನಿಷ್ಕಳಂಕ ಪ್ರೀತಿಯ ಸುಧೆಯಲ್ಲಿ ಅವರನ್ನು ಮುಳುಗಿಸಿ ಬಿಡುತ್ತಿದ್ದರು.

ಅಮ್ರುಬಿನ್‌ಆಸ್(ರ)ರವರು ಅರಬರಲ್ಲಿ ಅತ್ಯಂತ ಬುದ್ಧಿಶಾಲಿ, ಧೈರ್ಯವಂತ, ಪರಾಕ್ರಮಶಾಲಿಗಳೆಂದು ಪರಿಗಣಿಸಲ್ಪಡುವವರಲ್ಲಿ ಒಬ್ಬರಾಗಿದ್ದಾರೆ. ಇಂತಹಾ ಪ್ರಭಾವಶಾಲಿಗಳಿಗೆ ಅರಬರಲ್ಲಿ ಪ್ರತ್ಯೇಕ ಸ್ಥಾನ-ಮಾನಗಳಿರುತ್ತದೆ. ಅಮ್ರು ತನ್ನ ಸಮುದಾಯದಲ್ಲಿ ಉನ್ನತ ಪ್ರಭಾವವನ್ನು ಹೊಂದಿದ್ದರು. ಅವರು ಇಸ್ಲಾಮ್ ಸ್ವೀಕರಿಸಿದ ಬಳಿಕ ಪ್ರವಾದಿ (ಸ)ರವರನ್ನು ಭೇಟಿಯಾದಾಗಲೆಲ್ಲಾ ಪ್ರವಾದಿ (ಸ)ರವರ ಹೃದಯದಲ್ಲಿ ಅವರ ಕುರಿತಾಗಿರುವ ಪ್ರೀತಿ-ವಿಶ್ವಾಸವನ್ನು ಸ್ಪಷ್ಟವಾಗಿ ಕಂಡುಕೊಳ್ಳುತ್ತಿದ್ದರು. ಅವರನ್ನು ಕಂಡಾಗ ಪ್ರವಾದಿ(ಸ)ರವರ ಮುಖದಲ್ಲಿ ಪ್ರಕಟವಾಗುವ ಇಷ್ಟ ಮತ್ತು ಆನಂದ ಅವರಲ್ಲಿ ಸ್ಫೂರ್ತಿ ತುಂಬುತ್ತಿತ್ತು. ಅವರು ಪ್ರವಾದಿ(ಸ)ರವರ ಸಭೆಯಲ್ಲಿ ಪಾಲ್ಗೊಂಡಾಗಲೆಲ್ಲಾ ಹೃದಯ ಸ್ಪರ್ಶಿಯಾದ ಸ್ವಾಗತವನ್ನೂ ಗೌರವವನ್ನೂ

ಪಡೆಯುತ್ತಿದ್ದರು. ಪ್ರವಾದಿ(ಸ)ರವರು ಅವರಿಗೆ ಇಷ್ಟವಾಗುವ ಹೆಸರಿನಿಂದಲೇ ಅವರನ್ನು ಕರೆಯುತ್ತಿದ್ದರು. ಅಮ್ರು(ರ)ರವರು ಪ್ರವಾದಿ(ಸ)ರವರ ಈ ವಿಶೇಷ ಸತ್ಕಾರ ಮತ್ತು ನಡವಳಿಕೆಯನ್ನು ಕಂಡು ನಾನು ಅವರಿಗೆ ಅತ್ಯಂತ ಪ್ರೀತಿ ಪಾತ್ರನೆಂದು ಭಾವಿಸಿಕೊಂಡು ಬಿಟ್ಟಿದ್ದರು. ಒಂದು ದಿನ ಅವರು ತನ್ನ ಈ ಭಾವನೆಯನ್ನು ಸತ್ಯವೆಂದು ದೃಢೀಕರಿಸ ಬಯಸಿದರು.

ಹೀಗೆ ಒಂದು ದಿನ ಅಮ್ರು(ರ) ಪ್ರವಾದಿ(ಸ)ರವರ ಬಳಿ ಬಂದರು ಮತ್ತು ಅವರ ಬಳಿ ಕುಳಿತುಕೊಂಡು ಕೇಳಿದರು "ಹೇ ಅಲ್ಲಾಹ್‌ನ ಪ್ರವಾದಿಗಳೇ! ನಿಮಗೆ ಅತ್ಯಂತ ಇಷ್ಟವಾದ ವ್ಯಕ್ತಿ ಯಾರು?"

"ಆಯಿಷಾ" ಪ್ರವಾದಿ(ಸ) ಉತ್ತರಿಸಿದರು.

ಅಮ್ರು(ರ)ಹೇಳಿದರು, "ನಾನು ನಿಮ್ಮ ಮನೆಯವರ ಕುರಿತು ಕೇಳಿದ್ದಲ್ಲ, ಬದಲಾಗಿ ಪುರುಷರಲ್ಲಿ ನಿಮಗೆ ಅತ್ಯಂತ ಇಷ್ಟ ಪಟ್ಟವರು ಯಾರು?

"ಆಯಿಷಾರ ತಂದೆ" ಪ್ರವಾದಿ (ಸ)ರವರ ಉತ್ತರ.

ಅಮ್ರು(ರ) ಕೇಳಿದರು "ಬಳಿಕ ಯಾರು?

"ಬಳಿಕ ಉಮರ್ ಬಿನ್ ಖತ್ತಾಬ್"

ಅಮ್ರು(ರ) ಹೇಳುತ್ತಾರೆ "ನನ್ನ ಹೆಸರು ಈ ಪಟ್ಟಿಯಕೊನೆಯಲ್ಲಿ ಸೇರಿರಬಹುದೇ? ಎಂದು ಭಾವಿಸಿ ಬಳಿಕ ನಾನು ಸುಮ್ಮನಾಗಿಬಿಟ್ಟೆ."

ಇಲ್ಲಿ ಪ್ರವಾದಿ(ಸ) ರವರ ನಡವಳಿಕೆಗಳು ಅಮ್ರು ಬಿನ್‌ಆಸ್(ರ) ರವರ ಮನದಲ್ಲಿ ಎಂತಹಾ ಪ್ರಭಾವವನ್ನುಂಟು ಮಾಡಿತ್ತೆಂದು ನಾವು ಅಂದಾಜಿಸಬಹುದಾಗಿದೆ. ಪ್ರವಾದಿ(ಸ)ರವರು ಜನರಿಗೆ ಅವರ ಸ್ಥಾನ-ಮಾನಕ್ಕೆ ತಕ್ಕಂತೆ ನೆಲೆ-ಬೆಲೆ ಕಲ್ಪಿಸುತ್ತಿದ್ದರು. ಮತ್ತು ಅದಕ್ಕೆ ಅನುಸರಿಸಿ ಕೊಂಡು ಅವರಿಗೆ ಹೊಣೆಗಾರಿಕೆಯನ್ನು ಕಲ್ಪಿಸಿಕೊಡುತ್ತಿದ್ದರು. ಇದರಿಂದ ಅವರಿಗೆ ಪ್ರವಾದಿ(ಸ) ತಮ್ಮನ್ನು ಎಷ್ಟೊಂದು ಆತ್ಮೀಯರೆಂದು ಪರಿಗಣಿಸುತ್ತಾರೆ ಎಂಬ ಭಾವನೆಯು ಅವರಲ್ಲಿ ಉಂಟಾಗುತ್ತಿತ್ತು.

ಪ್ರವಾದಿ(ಸ) ಸೈನಿಕ ಕಾರ್ಯಾಚರಣೆಗಳನ್ನು ತೀವ್ರಗೊಳಿಸಿದ ಸಮಯ, ಇಸ್ಲಾಂ ವೇಗದಲ್ಲಿ ಹರಡುತ್ತಿತ್ತು. ಅವರು ವಿವಿಧ ಗೋತ್ರಗಳನ್ನು ಇಸ್ಲಾಮಿನ ಕಡೆಗೆ ಆಕರ್ಶಿಸುವ ಸಲುವಾಗಿ ಪ್ರಭೋದಕರನ್ನು ಕಳುಹಿಸುತ್ತಿದ್ದರು. ಅಗತ್ಯ ಬಿದ್ದಾಗ ಕೆಲವೊಮ್ಮೆ ಸೈನ್ಯವನ್ನು ರವಾನಿಸುತ್ತಿದ್ದರು. ಅದೀ ಬನೂ ಹಾತಿಮ್ ಬನೂ ತೈನ ಸರದಾರರೂ ಸರದಾರರ ಪುತ್ರರೂ ಆಗಿದ್ದರು. ಪ್ರವಾದಿ(ಸ) ಬನೂತೈಯವರ ಕಡೆಗೆ ಇಸ್ಲಾಮೀ ಸೇನೆಯನ್ನು ರವಾನಿಸಿದರು. ಅದೀಬಿನ್ ಹಾತಿಮ್ ಯುದ್ಧದಿಂದ ತಪ್ಪಿಸಿಕೊಂಡು ರೋಮ್ ಚಕ್ರವರ್ತಿಗಳ ಆಶ್ರಯ ಕೋರಿ ಸಿರಿಯಾಕ್ಕೆ ಓಡಿ ಹೋದರು.

ಮುಸಲ್ಮಾನರು ಬನೂತೈಯನ್ನು ನಿರಾಯಾಸವಾಗಿ ವಶಪಡಿಸಿಕೊಂಡರು. ಸೈನಿಕ ಕಾರ್ಯಾಚರಣೆಯ ಸಮಯದಲ್ಲಿ ಇಸ್ಲಾಮೀ ಸೈನಿಕರು ಜನರಿಗೆ ಉತ್ಕೃಷ್ಟ ಸ್ವಭಾವವನ್ನು ಪ್ರಕಟಿಸಲು ಮತ್ತು ಶ್ರೇಷ್ಠರೀತಿಯಲ್ಲಿ ಮಾತಾಡಲು ನಿರ್ದೇಶಿಸಲ್ಪಟ್ಟಿರುತ್ತಿದ್ದರು. ಬನೂತೈನ ಮೇಲೆ ಆಕ್ರಮಣದ ಉದ್ದೇಶವು ಇಸ್ಲಾಮಿನ ಶತ್ರುಗಳಿಂದ ಮುಸಲ್ಮಾನರ ಸಂರಕ್ಷಣೆಯೇ ಆಗಿತ್ತು. ಮತ್ತು ಅವರ ಹೃದಯದಲ್ಲಿ ಮುಸ್ಲಿಮರ ಕುರಿತ ಆಕರ್ಷಣೆ ಮತ್ತು ಭಯವನ್ನು ಸೃಷ್ಟಿಸುವುದಾಗಿತ್ತು.

ಮುಸ್ಲಿಮರು ಅದೀಯ ಕೆಲವು ಜನರನ್ನು ಬಂಧಿಸಿ ಯುದ್ಧ ಕೈದಿಗಳಾಗಿ ಮಾಡಿಕೊಂಡರು ಮತ್ತು ಅವರನ್ನು ಮದೀನಾಕ್ಕೆ ಕರೆತಂದರು. ಕೈದಿಗಳಲ್ಲಿ ಅದೀ ಬಿನ್ ಹಾತಿಮ್‌ರ ಸಹೋದರಿಯೂ ಸೇರಿದ್ದರು. ಪ್ರವಾದಿ(ಸ)ರವರಿಗೆ ಇದೀಬಿನ್ ಹಾತಿಮ್ ಸಿರಿಯದ ಕಡೆ ಪಲಾಯನ ಮಾಡಿರುವ

ಸುದ್ದಿ ತಲುಪಿಸಿದಾಗ "ಅವನು ತನ್ನ ಧರ್ಮ ಮತ್ತು ಜನರನ್ನು ಬಿಟ್ಟು ಹೇಗೆ ಓಡಿಹೋದರೆಂದು ಆಶ್ಚರ್ಯ ವ್ಯಕ್ತ ಪಡಿಸಿದರು. ಈಗ ಅದೀಯನ್ನು ತಲುಪುವ ಯಾವುದೇ ದಾರಿ ಇರಲಿಲ್ಲ. ಅತ್ತಕಡೆ ಅದೀಗೆ ಕೂಡಾ ರೋಮನ್ನರ ಪರಿಸರದಲ್ಲಿ ವಾಸಿಸಲು ಇಷ್ಟವೆನಿಸಲಿಲ್ಲ. ಬೇರೆ ದಾರಿ ಇಲ್ಲದೆ ಅವರು ಅರಬ್ ಸ್ಥಾನಕ್ಕೆ ಮರಳಿ ಬಿಟ್ಟರು. ಬಳಿಕ ಅಲ್ಲಿ-ಇಲ್ಲಿ ಅಡ್ಡಾಡಿಕೊಂಡು ಬೇರೆ ನಿರ್ವಾಹವಿಲ್ಲದೆ ಅಂತಿಮವಾಗಿ ಮದೀನಕ್ಕೆ ಬಂದು ಪ್ರವಾದಿ(ಸ)ರನ್ನು ಕಂಡು ಶರ್ತಬದ್ಧವಾಗಿ ಅಲ್ಲೇ ಉಳಿದುಕೊಂಡರು.

ಅದೀ ಮದೀನಕ್ಕೆ ಬಂದ ಕುರಿತಾದ ತನ್ನ ಅನುಭವವನ್ನು ಬಿಚ್ಚಿಡುತ್ತಾರೆ. "ನನಗೆ ಮುಹಮ್ಮದ್(ಸ)ರವರಿಗಿಂತ ಅನಿಷ್ಟ ವ್ಯಕ್ತಿ ಅರಬರಲ್ಲಿ ಇತರ ಯಾರೂ ಇರಲಿಲ್ಲ. ನಾನು ಕೈಸ್ತ ಧರ್ಮವನ್ನು ಅವಲಂಬಿಸಿಕೊಂಡಿದ್ದೆ ಮತ್ತು ನನ್ನ ಸಮುದಾಯಕ್ಕೆ ನಾನೇ ಸರದಾರನಾಗಿದ್ದೆ. ನಾನು ಪ್ರವಾದಿ(ಸ)ರವರ ಕುರಿತು ಕೇಳಿದಾಗ, ನನ್ನಮನದಲ್ಲಿ ಅವರ ವಿರುದ್ಧ ದ್ವೇಷ ಹುಟ್ಟಿಕೊಂಡಿತು. ನಾನು ಮನೆಯಿಂದ ಪಲಾಯನ ಮಾಡಿ ರೋಮ್ ಚಕ್ರವರ್ತಿ ಕೈಸರ್‌ನಲ್ಲಿ ಅಭಯ ಪಡೆದುಕೊಂಡೆ. ನನಗೆ ಅಲ್ಲೂ ನೆಲೆಸಲು ಸರಿಯಾಗಲಿಲ್ಲ. ನಂತರ ಚೆನ್ನಾಗಿ ಆಲೋಚಿಸಿಕೊಂಡು ಅವರ ಬಳಿಗೇ (ಪ್ರವಾದಿ (ಸ) ಹೋಗಲು ನಿರ್ಧರಿಸಿದೆ. ಅವರು ಸತ್ಯವಂತರೋ, ಸುಳ್ಳರೋ ಎಂದು ಕಂಡು ಕೊಂಡಂತಾಗುವುದೆಂದು ನಿಶ್ಚಯಿಸಿಕೊಂಡು ಮದೀನಾದ ಕಡೆಗೆ ಹೊರಟು ಬಿಟ್ಟೆ. ನಾನು ಮದೀನಾದಲ್ಲಿ ಕಾಲಿಟ್ಟಾಗ ನನ್ನನ್ನು ಕಂಡ ಜನರು "ಇದೇ ಅದೀಬಿನ್ ಹಾತಿಮ್ ... ಇದೋ ಅದೀ ಬಿನ್ ಹಾತಿಮ್" ಎಂದು ಬೊಬ್ಬೆ ಹೊಡೆಯಲಾರಂಭಿಸಿದರು. ನಾನು ನಡೆಯುತ್ತಾ.. ನಡೆಯುತ್ತಾ ಮಸೀದಿಯನ್ನು ಪ್ರವೇಶಿಸಿಬಿಟ್ಟೆ. ಪ್ರವಾದಿ (ಸ)ನನ್ನನ್ನು ಕಂಡು "ನೀವು ಅದೀ ಬಿನ್ ಹಾತಿಮ್ ಅಲ್ಲವೇ?" ಎಂದು ವಿಚಾರಿಸಿದರು. ನಾನು "ಹೌದು, ನಾನು ಅದೀಬಿನ್ ಹಾತಿಮ್" ಎಂದು ಉತ್ತರಿಸಿದೆ. ನನ್ನ ಆಗಮನದಿಂದ ಪ್ರವಾದಿ(ಸ) ಅತ್ಯಂತ ಹರ್ಷ ಚಿತ್ತರಾದರು. ನಾನು ಮುಸಲ್ಮಾನರ ಶತ್ರು ಆಗಿದ್ದಾಗ್ಯೂ ಅವರ ಈ ವರ್ತನೆ ನನಗೆ ಸಕತ್ ಆಶ್ಚರ್ಯವನ್ನುಂಟು ಮಾಡಿತು. ನಾನು ಯುದ್ಧದಿಂದ ಪಲಾಯನ ಮಾಡಿಕೊಂಡು. ಇಸ್ಲಾಮ್‌ನ ಮೇಲೆ ದ್ವೇಷದಿಂದ ಕ್ರಿಶ್ಚಿಯಾನಿಗಳ ಅಭಯ ಪಡೆದುಕೊಂಡು ಹೋಗಿದ್ದೆ. ಆದರೆ ಇದು ಯಾವುದರ ಪರಿವೆಯೂ ಇಲ್ಲದಂತೆ ಪ್ರವಾದಿ(ಸ) ನನ್ನನ್ನು ಸ್ವಾಗತಿಸಿಕೊಂಡರು. ಪ್ರೀತ್ಯಾದರದಿಂದ ಮಾತಾಡಿಸಿದರು. ಗೌರವ ನೀಡಿ ನನ್ನ ಕೈ ಹಿಡಿದುಕೊಂಡು ಅವರ ನಿವಾಸದತ್ತ ಸಾಗಿದರು. ಅವರೊಂದಿಗೆ ಸಾಗುತ್ತಿದ್ದಾಗ ನನಗೆ "ನಾನು ಮತ್ತು ಮುಹಮ್ಮದ್(ಸ) ಎರಡು ಸಮುದಾಯಗಳ ಎರಡು ಸರದಾರರು" ಎಂಬಂತಹಾ ಭಾವನೆಯಷ್ಟೇ ಉಂಟಾಯಿತು.

"ಮುಹಮ್ಮದ್ ಮದೀನಾ ಮತ್ತು ಪರಿಸರಕ್ಕೆ ಸಾಮ್ರಾಟರಾಗಿದ್ದಾರೆ"
"ಅದೀ ಬನೂತ್ಯೆ ಮತ್ತು ಅದರ ಸುತ್ತಮುತ್ತಲಿನ ಜನರ ನಾಯಕ ರಾಗಿದ್ದಾರೆ"
"ಮುಹಮ್ಮದ್ ದೇವನ ಒಂದು ಧರ್ಮ 'ಇಸ್ಲಾಮ್'ನ್ನು ಅನುಸರಿಸುತ್ತಾರೆ.
"ಅದೀದೇವನ ಇನ್ನೊಂದು ಧರ್ಮ 'ಕ್ರಿಸ್ತ ಧರ್ಮ' ವನ್ನು ಅನುಸರಿಸುತ್ತಾರೆ.
ಮುಹಮ್ಮದ್ (ಸ)ರೊಂದಿಗೆ ದಿವ್ಯಗ್ರಂಥ 'ಕುರ್ ಆನ್' ಇದ್ದರೆ
ಅದಿಯೊಂದಿಗೆ ಇನ್ನೊಂದು ದಿವ್ಯಗ್ರಂಥ 'ಇಂಜೀಲ್'ಇದೆ.

ಈ ಪ್ರಕಾರದ ಆಲೋಚನೆಗಳು ಅದೀಯವರಲ್ಲಿ ಮುಹಮ್ಮದ್ ಮತ್ತು ನನ್ನ ನಡುವೆ ಸೈನಿಕ ಶಕ್ತಿಯಲ್ಲಿನ ಕೊರತೆಯನ್ನು ಬಿಟ್ಟರೆ ಬೇರೆ ಯಾವ ವ್ಯತ್ಯಾಸವೂ ಇಲ್ಲವೆಂಬ ಭಾವನೆ ಮೊಳೆಯಿತು.

ರಸ್ತೆಯಲ್ಲಿ ಪ್ರವಾದಿ(ಸ) ಮೂರು ಸ್ಥಳದಲ್ಲಿ ನಿಂತರು.

ಪ್ರಥಮವಾಗಿ ಒಂದು ಮಹಿಳೆ ರಸ್ತೆಯಲ್ಲಿ ನಿಂತು ಕರೆಯಲಾರಂಭಿಸಿದರು. 'ಹೇ ಅಲ್ಲಾಹನ ಸಂದೇಶವಾಹಕರೇ! ನಿಮ್ಮಿಂದ ನನಗೊಂದು ಅವಶ್ಯ ಕೆಲಸವಾಗಬೇಕಾಗಿದೆ" ಪ್ರವಾದಿ(ಸ) ಅದೀಯವರ ಕೈ ಬಿಟ್ಟುಬಿಟ್ಟರು. ಮತ್ತು ಮಹಿಳೆಯ ಕಡೆ ತೆರಳಿದರು. ಮತ್ತು ಅತ್ಯಂತ ಶ್ರದ್ಧೆಯಿಂದ ಅವರ ಮಾತನ್ನು ಆಲಿಸಿದರು.

ಅದೀಬಿನ್ ಹಾತಿಮ್ ಸರದಾರನಾಗಿಯೂ ಸಾಮ್ರಾಟನಾಗಿಯೂ ಬಾಳಿದವರು. ಅವರು ಪ್ರವಾದಿ(ಸ)ರವರು ಜನರೊಂದಿಗೆ ತೋರುವ ಸದ್ವರ್ತನೆ ಮತ್ತು ಪ್ರಾಮಾಣಿಕ ನಿಷ್ಕಳಂಕ ನಡವಳಿಕೆಯನ್ನು ಕಣ್ಣಾರೆ ಕಂಡರು. ತುಂಬಾ ಸಮಯದ ತನಕ ಅವರು ಪ್ರವಾದಿ(ಸ)ರನ್ನೇ ತದೇಕ ಚಿತ್ತದಿಂದ ಅವಲೋಕಿಸಿಕೊಂಡು ತನ್ನಷ್ಟಕ್ಕೇ "ಅಲ್ಲಾಹ ನಾಣೆ! ಇದು ಸರದಾರರು ಅಥವಾ ಸಾಮ್ರಾಟರ ನಡವಳಿಕೆ ಖಂಡಿತವಾಗಿಯೂ ಅಲ್ಲ. ಇದು ಅಂಬಿಯಾಗಳ ನಡವಳಿಕೆಯೇ ಆಗಿದೆ."ಎಂದು ಹೇಳಿಕೊಂಡರು.

ಆ ಮಹಿಳೆ ತನ್ನ ಮಾತನ್ನು ಪೂರ್ತಿಗೊಳಿಸದ ನಂತರ ಪ್ರವಾದಿ(ಸ) ಅದೀಯವರ ಬಳಿಗೆ ಬಂದರು. ಬಳಿಕ ಇಬ್ಬರೂ ಮುನ್ನಡೆದರು.

ರಸ್ತೆಯಲ್ಲಿ ಒಬ್ಬ ವ್ಯಕ್ತಿ ಎದುರಾದರು. ಮತ್ತು ಆಕ್ಷೇಪಕರವಾಗಿ ಹೇಳಿದರು, ಯಾ ರಸೂಲುಲ್ಲಾಹ್! ತಿನ್ನಲೂ ಏನೂ ಇಲ್ಲ. ಹಸಿವಿನಿಂದ ಸಾಯುತ್ತಿದ್ದೇವೆ. ಬಡತನವು ಬೆನ್ನಮೂಲೆಯನ್ನೇ ಮುರಿದುಬಿಟ್ಟಿದೆ"

ಆ ವ್ಯಕ್ತಿ ಆಕ್ಷೇಪಿಸಿರುವುದನ್ನು ಅದೀ ಆಲಿಸುತ್ತಿದ್ದರು. ಪ್ರವಾದಿ(ಸ) ಆ ವ್ಯಕ್ತಿಗೆ ಸಂಕ್ಷಿಪ್ತವಾಗಿ ಉತ್ತರ ಕೊಟ್ಟರು ಮತ್ತು ಮುನ್ನಡೆದರು. ನಾಲ್ಕು ಹೆಜ್ಜೆ ಮುನ್ನಡೆಯುವಷ್ಟರಲ್ಲಿ ಇನ್ನೊಬ್ಬ ವ್ಯಕ್ತಿ ಬಂದರು ಮತ್ತು ಹೇಳಿದರು, "ಹೇ ಅಲ್ಲಾಹನ ಪ್ರವಾದಿಗಳೇ! ಸುತ್ತಮುತ್ತಲಿನ ದಾರಿಯಲ್ಲಿ ನಡೆದಾಡುವುದು ಕಷ್ಟವಾಗಿದೆ. ಜನರನ್ನು ಖದೀಮರು ಕೊಳ್ಳೆ ಹೊಡೆಯುತ್ತಿದ್ದಾರೆ"

ಪ್ರವಾದಿ(ಸ)ಅವರಿಗೂ ಸಂಕ್ಷಿಪ್ತ ಉತ್ತರವನ್ನು ಕೊಟ್ಟು ಮುನ್ನಡೆದರು. ಅದೀ ತನ್ನ ಹೃದಯದೊಳಗೆ ಈ ಘಟನೆಗಳನ್ನು ಮೆಲುಕು ಹಾಕುತ್ತಾ ಮುನ್ನಡೆದರು. "ನಾನು ನನ್ನ ಸಮುದಾಯದ ಸರದಾರನಾಗಿದ್ದೇನೆ. ನನಗೆ ನನ್ನದೇ ಆದ ಗೌರವವಿದೆ. ಒಂದು ಸ್ಥಾನವಿದೆ. ನನ್ನ ಶತ್ರುಗಳು ರಸ್ತೆಗಳಲ್ಲಿ ನನ್ನನ್ನು ಕೊಳ್ಳೆ ಹೊಡೆಯುವುದಿಲ್ಲ. ಹೀಗಿರಲು ನಾನೇಕೆ ಇಂತಹಾ ಒಂದು ಧರ್ಮದಲ್ಲಿ... ಸಮುದಾಯದಲ್ಲಿ ಸೇರಿಕೊಳ್ಳಬೇಕು. ಈ ಸಮುದಾಯದ ಜನರು ಬಡತನ ಮತ್ತು ದಾರಿದ್ರ್ಯದಿಂದ ಜೀವಿಸುತ್ತಿದ್ದಾರೆ. ಬಡತನವು ಇವನರನ್ನು ಹಿಂಡಿ ಹಿಪ್ಪೆ ಮಾಡಿ ಬಿಟ್ಟಿದೆ" ಎಂದೆಲ್ಲಾ ಆಲೋಚಿಸ ತೊಡಗಿದರು.

ಈಗ ಇಬ್ಬರೂ ಮನೆ ತಲುಪಿದರು. ಮನೆಯಲ್ಲಿ ಒಂದೇ ಕುರ್ಚಿ ಇತ್ತು. ಅದನ್ನು ಪ್ರವಾದಿ(ಸ) ಅದೀಯವರ ಕಡೆ ಸರಿಸುತ್ತಾ "ಇದನ್ನು ಸ್ವೀಕರಿಸಿಕೊಂಡು ಇದರಲ್ಲಿ ಕುಳಿತುಕೊಳ್ಳಿರಿ"ಎಂದರು. ಅದಿ ಕುರ್ಚಿಯನ್ನು ಪ್ರವಾದಿ(ಸ)ರವರ ಕಡೆಗೆ ತಳ್ಳುತ್ತಾ "ನೀವು ಕುಳಿತುಕೊಳ್ಳಿರಿ ಎಂದರು". ಪ್ರವಾದಿ(ಸ) ಕುರ್ಚಿಯಲ್ಲಿ ಅದೀಯವರನ್ನು ಕುಳ್ಳಿರಿಸಿದರು.

ಈಗ ಪ್ರವಾದಿ (ಸ) ಅದೀ ಮತ್ತು ಇಸ್ಲಾಮ್‌ನ ನಡುವಿನ ಅಂತರವನ್ನು ನಿವಾರಿಸುವ ನೆಲೆಯಲ್ಲಿ ಮಾತಾಡುತ್ತಾ ಹೇಳಿದರು,

"ಅದೀ! ನೀವು ಇಸ್ಲಾಮ್ ಸ್ವೀಕರಿಸಿರಿ. ನೀವು ಸುರಕ್ಷಿತರಾಗಿರುತ್ತೀರಿ." ಈ ಮಾತನ್ನು

ಪ್ರವಾದಿ(ಸ) ಮೂರು ಸಲ ಪುನರಾವರ್ತಿಸಿದರು.

ಅದೀ ಉತ್ತರಿಸುತ್ತಾ ಹೇಳಿದರು, "ನಾನು ಕೂಡಾ ಒಂದು ಧರ್ಮವನ್ನು ಅನುಸರಿಸಿ ಜೀವಿಸುತ್ತಿದ್ದೇನೆ."

ಪ್ರವಾದಿ (ಸ)ಹೇಳಿದರು "ನಾನು ನಿಮ್ಮ ಧರ್ಮವನ್ನು ನಿಮಗಿಂತ ಹೆಚ್ಚು ಅರಿತುಕೊಂಡಿದ್ದೇನೆ"

ಅದೀ ಗಾಬರಿಗೊಂಡರು "ತಾವು ನನ್ನ ಧರ್ಮವನ್ನು ನನಗಿಂತ ಹೆಚ್ಚಾಗಿ ಅರಿತಿರುವಿರೇ?"

ಪ್ರವಾದಿ ಉತ್ತರಿಸಿದರು.

"ನೀವು ರುಕೂಸಿ ವಿಭಾಗಕ್ಕೆ ಸೇರಿರುವಿರಲ್ಲವೇ?" ರುಕೂಸಿ ಎನ್ನುವುದು ಕ್ರಿಶ್ತಿಯಾನಿಗಳಲ್ಲಿ ಒಂದು ವಿಭಾಗವಾಗಿದೆ. ಅಗ್ನಿ ಆರಾಧಕ (ಮಜೂಸಿ)ರ ಪ್ರಭಾವವು ಅವರಲ್ಲಿ ಗೋಚರಿಸುವುದಿದೆ. ಪ್ರವಾದಿ(ಸ) ಇತರರನ್ನು ಸಂಬೋಧಿಸುವ ವಿಧಾನ ಅನುಪಮವಾಗಿತ್ತು. ಅವರು ಅದೀಯೊಂದಿಗೆ "ನೀವು ಕ್ರೈಸ್ತರಲ್ಲವೇ?" ಎಂದು ಕೇಳಲಿಲ್ಲ. ಬದಲಾಗಿ ಕ್ರಿಶ್ಚಿಯನ್ ಧರ್ಮದ ಕುರಿತು ಆಳವಾದ ಅರಿವು ಇರುವವರು ಕೇಳುವಂತೆ ಆ ಧರ್ಮದ ಇಂತಿಂತಹಾ ವಿಭಾಗದವರಲ್ಲವೇ? ಎಂದು ಕೇಳುವ ಮೂಲಕ ಆ ಧರ್ಮದ ಆಂತರ್ಯವನ್ನೇ ಅವರ ಮುಂದೆ ತೆರೆದಿಟ್ಟರು.

ಈ ವಿಷಯವನ್ನು ನಾವು ಈ ಒಂದು ಉದಾಹರಣೆಯೊಂದಿಗೆ ಇನ್ನಷ್ಟು ಚೆನ್ನಾಗಿ ಮನವರಿಕೆ ಮಾಡಿಕೊಳ್ಳಬಹುದು. ನೀವು ಯುರೋಪಿನ ಯಾವುದಾದರೂ ರಾಷ್ಟ್ರಕ್ಕೆ ಭೇಟಿ ನೀಡಿದಿರೆಂದಿಟ್ಟುಕೊಳ್ಳಿ. ಯಾವುದಾದರೂ ನಸ್ರಾನಿ ನಿಮ್ಮನ್ನು ಕಂಡು "ನೀವೇಕೆ ನಸ್ರಾನಿಯಾಗುವುದಿಲ್ಲ? ಎಂದು ಕೇಳಿದರೆ ನೀವು ಖಂಡಿತ "ನಾನೊಂದು ಧರ್ಮವನ್ನು ಅವಲಂಬಿಸಿ ಜೀವಿಸುತ್ತಿದ್ದೇನೆ" ಎಂದು ಉತ್ತರಿಸುತ್ತೀರಿ. ತಕ್ಷಣ ಅವನು "ನೀವು ಮುಸಲ್ಮಾನನಲ್ಲವೇ? ಎಂದೊ "ನೀವು ಸುನ್ನಿಯಲ್ಲವೇ?" ಎಂದೊ ಪ್ರಶ್ನಿಸುವ ಬದವಾಗಿ "ನೀವು ಶಾಫಿಈ ಅಲ್ಲವೇ? ಎಂದೊ "ನೀವು ಹನಫಿಯಲ್ಲವೇ? ಎಂದೊ ವಿಚಾರಿಸಿದರೆ ನೀವು ಅವನ ಬಗ್ಗೆ ಏನೆಂದುಕೊಳ್ಳುತ್ತೀರಿ? ಅವನು ನಿಮ್ಮ ಧರ್ಮದ ಆಳ ಹರಿವನ್ನು ಅರಿತಿದ್ದಾನೆಂಬ ಕಲ್ಪನೆ ತಕ್ಷಣ ನಿಮ್ಮಲ್ಲಿ ಜಾಗ್ರತವಾಗುತ್ತದೆ.

ಪ್ರವಾದಿ(ಸ) ಅದೀಯೊಂದಿಗೂ ಮಾತುಕತೆಯ ಇದೇ ಕ್ರಮ ಅನುಸರಿಸಿದರು. "ನೀವು ರುಕೂಸಿ ವಿಭಾಗಕ್ಕೆ ಸೇರಿರುವಿರಲ್ಲವೇ?"

"ಹೌದು ನಾನು ರುಕೂಸಿ ವಿಭಾಗಕ್ಕೆ ಸೇರಿದವನೇ ಆಗಿದ್ದೇನೆ" ಅದೀ ಉತ್ತರಿಸಿದರು.

ಪ್ರವಾದಿ (ಸ) ಕೇಳಿದರು.

"ನಿಮ್ಮ ಸಮುದಾಯವು ನಿಮಗಾಗಿ ಯುದ್ಧ ಮಾಡುತ್ತಾ ಗಳಿಸಿದ ಸಮರಾರ್ಜಿತ ಸೊತ್ತನ್ನು ನೀವು ತಿನ್ನುವುದಿಲ್ಲವೇ?"

"ಖಡಿತವಾಗಿಯೂ ತಿನ್ನುತ್ತೇನೆ"

"ನಿಮ್ಮ ಧರ್ಮದ ಪ್ರಕಾರ ಹಾಗೆ ಮಾಡುವುದು ನಿಮಗೆ ಧರ್ಮಬದ್ಧವಲ್ಲ"

"ಹೌದು ಅದು ನಮಗೆ ಹಲಾಲ್ ಅಲ್ಲ" ಅದೀ ಕ್ಷೀಣ ಸ್ವರದಲ್ಲಿ ಉತ್ತರ ನೀಡಿದರು.

ಪ್ರವಾದಿ (ಸ) ಕೇಳಿದರು,

"ನಿಮ್ಮನ್ನು ಇಸ್ಲಾಮ್ ಸ್ವೀಕರಿಸುವುದರಿಂದ ತಡೆಹಿಡಿದಿರುವ ಅಂಶವಾದರೂ ಏನು? ಕೆಲವು ಹರಕು-ಮುರುಕು ಬಟ್ಟೆಯ ದುರ್ಬಲ ಜನರು ನನ್ನ ಹಿಂದೆ ನಿಂತಿದ್ದಾರೆ, ಅವರಿಗಾದರೊ ಯಾವುದೇ ರೀತಿಯ ಶಕ್ತಿ ಸಾಮರ್ಥ್ಯವೂ ಇಲ್ಲ. ಇನ್ನು ಅರಬರೂ ಅವರನ್ನು ತಮ್ಮ ವ್ಯಾಪ್ತಿಯಿಂದ ಹೊರಗಟ್ಟಿದ್ದಾರೆಂದು ನೀವು ಆಲೋಚಿಸುತ್ತಿದ್ದೀರೆನ್ನುವುದನ್ನು ನಾನು ಬಲ್ಲೆ"

"ಅದೀ! ನೀವು ಹೀರಾ ಕಂಡಿದ್ದೀರಾ?"

"ಕಂಡಿಲ್ಲ, ಆದರೆ ಆ ಕುರಿತು ಕೇಳಿದ್ದೇನೆ" ಅದೀ ಹೇಳಿದರು.

"ನನ್ನ ಜೀವ ಯಾರ ಕೈಯಲ್ಲಿದೆಯೋ ಅವನ ಮೇಲಾಣೆ! ಅಲ್ಲಾಹು ಈ ಕಾರ್ಯವನ್ನು ಪೂರ್ಣಗೊಳಿಸಿಯೇ ತೀರುತ್ತಾನೆ. ಒಂಟಿ ಹೆಣ್ಣು ಒಂಟೆಯ ಜೇನು ಹಿಡಿದುಕೊಂಡು ಹಿರಾದಿಂದ ಹೊರಟು ಯಾರದೇ ಅಭಯಾಶ್ರಯ ಪಡೆಯದೆ ನಡೆದುಕೊಂಡು ಬಂದು ಅಲ್ಲಾಹನ ಭವನ (ಕಾಬಾ) ಪ್ರದಕ್ಷಿಣೆ ಮಾಡುವಳು"

ಅಂದರೆ ಇಸ್ಲಾಮ್ ಎಂತಹಾ ಶಕ್ತಿಶಾಲಿಯಾಗಿ ಹೊರಹೊಮ್ಮುವುದೆಂದರೆ, ಹಜ್ಜ್ ನಿರ್ವಹಿಸಲು ಬರುವ ಮುಸ್ಲಿಮ್ ಸ್ತ್ರೀಯರು ಹಿರಾದಿಂದ ಹೊರಟು ನಿರಾಯಾಸವಾಗಿ ಮಕ್ಕಾ ತಲುಪಿ ಬಿಡುತ್ತಾಳೆ. ಅವಳೊಂದಿಗೆ ಮುಹ್ರಿಮ್ ಅಲ್ಲದೆ ಇನ್ನಾರೂ ಇರಲಾರರು. ಅವಳು ಹಲವಾರು ಗೋತ್ರಗಳವರನ್ನು ದಾಟಿಕೊಂಡು ಇಲ್ಲಿಗೆ ಬರುವಳು. ಮುಸ್ಲಿಮರ ವೈಭವ-ಪ್ರಭಾವ ಮತ್ತು ಶಕ್ತಿ-ಸಾಮರ್ಥ್ಯಗಳ ಕಾರಣ ಅಂದು ಯಾರೂ ಅವಳನ್ನು ದೃಷ್ಟಿಸಿ ನೋಡುವ ಅವಳನ್ನು ಮುಟ್ಟುವ ಅಥವಾ ಅವಳ ಸೊತ್ತನ್ನು ಅಪಹರಿಸಲು ಪ್ರಯತ್ನಿಸಲಾರರು.

ಈ ಮಾತನ್ನು ಕೇಳಿದಾಗ ಅದೀಯ ಮನದಲ್ಲಿ ಸ್ತ್ರೀಯೊಬ್ಬಳು ಇರಾಕ್‌ನಿಂದ ಹೊರಟು ಮಕ್ಕಾ ತಲುಪುವ ಚಿತ್ರಣ ಮೂಡಿಬಂತು. ಅಂದರೆ ಅವಳು ಇರಾಕಿನಿಂದ ಹೊರಟು ದಕ್ಷಿಣಕ್ಕಿರುವ ತನ್ನ ಸಮುದಾಯದ ಮುಂದಿನಿಂದಲೇ ಹಾದು ಹೋಗುತ್ತಾಳೆ. ಅದೀ ಗಂಬೀರ ಚಿತ್ತನಾಗಿ ಆಲೋಚಿಸುತ್ತಾ "ತೈ ಗೋತ್ರದ ಭೀಕರ ಡಾಕೂಗಳು ಆಗ ಎಲ್ಲಿರುತ್ತಾರೆ? ಅವರೆಂದರೆ ಪರಿಸರವೆಲ್ಲಾ ನಡುಗಿ ಬಿಡುತ್ತದೆ" ಎಂದರು.

ಪ್ರವಾದಿ (ಸ) ಮುಂದುವರಿಸುತ್ತಾ ಹೇಳುತ್ತಾರೆ,

ಮತ್ತು ಖಿಸ್ರಾ ಬಿನ್ ಹರ್ಮರ್ಝ್‌ನ ಖಜಾನೆ ವಶಪಡಿಸಿಕೊಳ್ಳಲಾಗುವುದು" ಅದೀ ಇದನ್ನು ಕೇಳಿ ಹೈರಾನ್ ಆಗಿ "ಇಬ್ನ್ ಹರ್ಝುಮ್‌ನ ಖಜಾನೆಯೇ?" ಎಂದು ಕೇಳಿದರು. ಪ್ರವಾದಿ (ಸ) ಹೇಳಿದರು,

"ಹೌದು! ಖಿಸ್ರಾಬಿನ್ ಹರ್ಝುಮ್ ಮತ್ತು ಅವನ ಸೊತ್ತುಗಳನ್ನು ಅವಶ್ಯವಾಗಿ ಅಲ್ಲಾಹನ ಹಾದಿಯಲ್ಲಿ ಖರ್ಚು ಮಾಡಲಾಗುವುದು. ನೀವು ಒಂದೊಮ್ಮೆ ಬದುಕಿದ್ದರೆ ಜನರು ಕೈಯಲ್ಲಿ ಚಿನ್ನ ಅಥವಾ ಬೆಳ್ಳಿಯನ್ನು ಹಿಡಿದುಕೊಂಡು ಅದನ್ನು ಸ್ವೀಕರಿಸುವವರು ಯಾರಾದರೂ ಇದ್ದಾರೆಯೇ ಎಂದು ಹುಡುಕಾಡುವುದನ್ನು ನೀವು ಕಾಣುವಿರಿ. ಅಂದು ಅದನ್ನು ಯಾರೂ ಸ್ವೀಕರಿಸಲಾರರು."

ಅಂದರೆ, ಅಂದು ಸಂಪತ್ತಿನಲ್ಲಿ ಎಂತಹಾ ವೃದ್ಧಿಯಾಗುವುದೆಂದರೆ ಶ್ರೀಮಂತರು ತಮ್ಮ ಸೊತ್ತಿನ ಝಕಾತ್ ಪಡೆದುಕೊಳ್ಳಲು ಅರ್ಹರಾದ ಯಾರಾದರೂ ಲಭಿಸುತ್ತಾರೆಯೇ ಎಂದು ಅನ್ವೇಷಿಸಿ ನಡೆಯುವರು. ಆದರೂ ಅವರಿಗೆ ಯಾರೂ ಅದರ ಅವಶ್ಯಕತೆ ಇರುವವರು ದೊರಕಲಾರರು.

ಬಳಿಕ ಪ್ರವಾದಿ (ಸ) ಅದೀಯವರಿಗೆ ಅಖಿರತ್‌ನ ಕುರಿತು ಉಪದೇಶಿಸುತ್ತಾ ಹೇಳಿದರು,

"ಅಂತಿಮ ದಿನದಲ್ಲಿ ನಿಮ್ಮಲ್ಲಿ ಪ್ರತಿಯೊಬ್ಬರೂ ಅಲ್ಲಾಹನನ್ನು ಸಂಧಿಸುತ್ತೀರಿ. ಅಲ್ಲಾಹು ಮತ್ತು ನಿಮ್ಮ ನಡುವೆ ಮೂರನೇಯವರು ಯಾರೂ ಇರಲಾರರು. ನೀವು ಎಡಕ್ಕೆ ತಿರುಗಿ ನೋಡಿದರೆ ನರಕ್ಕೆ ಹೊರತಾಗಿ ಇನ್ನೇನೂ ಕಾಣಲಾರಿರಿ. ಬಲಕ್ಕೆ ತಿರುಗಿ ನೋಡಿದರೆ ಕೂಡಾ ನರಕವೇ ಕಾಣುವುದು."

ಅದೀ ಗಂಭೀರ ಆಲೋಚನೆಯಲ್ಲಿ ಮಗ್ನರಾದರು.

ಪ್ರವಾದಿ(ಸ) ಅವರನ್ನು ಎಚ್ಚರಿಸುತ್ತಾ ಕೇಳಿದರು "ನಿಮ್ಮನ್ನು ಇನ್ನೂ 'ಲಾ ಇಲಾಹ್ ಇಲ್ಲಲ್ಲಾಹ್' ದಿಂದ ತಡೆಯುವ ವಸ್ತುವಾದರೂ ಏನು? ನೀವೇನು ಅಲ್ಲಾಹನಿಗಿಂತಲೂ ಮಿಗಿಲಾದ ಇನ್ನೊಂದು ಆರಾಧ್ಯನಿರುವನೆಂದು ಭಾವಿಸುತ್ತೀರಾ...?"

ಅದೀ ಹೇಳಿದರು, "ನಾನು ಏಕ ನಿಷ್ಠ ಮುಸ್ಲಿಮನಾಗಿದ್ದೇನೆ. ನಾನು ಅಲ್ಲಾಹನಲ್ಲದೆ ಅನ್ಯ ಆರಾಧ್ಯನಿಲ್ಲವೆಂದೂ ಮುಹಮ್ಮದ್(ಸ) ಅಲ್ಲಾಹನ ದಾಸರೂ ಸಂದೇಶವಾಹಕರೂ ಆಗಿದ್ದಾರೆಂದು ಸಾಕ್ಷ್ಯ ವಹಿಸುತ್ತೇನೆ" ಅದೀ ಇದನ್ನು ಉಚ್ಚರಿಸುತ್ತಿದ್ದಂತೆಯೇ ಪ್ರವಾದಿ(ಸ)ರವರ ಮುಖ ಸಂತೋಷದಿಂದ ಅರಳಿತು.

ಅದೀ ಬಿನ್ ಹಾತಿಮ್(ರ) (ಈ ಹದೀಸನ್ನು ವರದಿ ಮಾಡುತ್ತಲೇ ವರದಿಗಾರರೊಂದಿಗೆ) ಹೇಳಿದರು. ಒಂಟೆಯ ಜೀನು ಹಿಡಿದುಕೊಂಡು ಈಗ ಸ್ತ್ರೀಯರು ಹೀರಾದಿಂದ ಬಂದು ನಿರ್ಭಯರಾಗಿ ತವಾಫ್ ಮಾಡುತ್ತಾರೆ. ಕಿಸ್ರಾನ ಖಜಾನೆ ವಶಪಡಿಸಿಕೊಂಡವರಲ್ಲಿ ನಾನೂ ಒಬ್ಬನಾಗಿದ್ದೇನೆ. ನನ್ನ ಪ್ರಾಣ ಯಾರ ಕೈಯಲ್ಲಿದೆಯೊ ಅವನ ಮೇಲಾಣೆ! ಪ್ರವಾದಿ(ಸ) ರವರ ಮೂರನೇ ಮಾತು ಕೂಡಾ ಸಾಕ್ಷಾತ್ಕಾರಗೊಂಡೇ ತೀರುವುದು."

ಪ್ರವಾದಿ (ಸ)ವರ ಈ ಉತ್ಕೃಷ್ಟ ನಡವಳಿಕೆಯ ಕುರಿತು ಗಂಭೀರವಾಗಿ ಆಲೋಚಿಸಿರಿ. ಹಝ್ರತ್ ಅದೀಬಿನ್ ಹಾತಿಮ್(ರ)ರವರ ತಪ್ಪು ಕಲ್ಪನೆಗಳನ್ನು ಎಷ್ಟೊಂದು ಉತ್ತಮ ರೀತಿಯಲ್ಲಿಪರಿಹರಿಸಿದರು. ಅವರೊಂದಿಗೆ ಎಂತಹಾ ಪ್ರೀತಿಯನ್ನು ಸದ್ವರ್ತನೆಯನ್ನೂ ತೋರಿದರು. ಇದು ಸ್ವತಹಾ ಅದೀ(ರ)ರವರಿಗೂ ಮನವರಿಕೆಯಾಗದೇ ಹೋಗಲಿಲ್ಲ. ಪ್ರವಾದಿ(ಸ) ರವರ ಇದೇ ಕ್ರಮವು ಹಝ್ರತ್ ಅದೀ (ರ)ರವರನ್ನು ಇಸ್ಲಾಮ್‌ಗೆ ನಿಕಟಗೊಳಿಸುವಲ್ಲಿ ನಿರ್ಣಾಯಕ ಪಾತ್ರ ವಹಿಸಿತು.

ನಾವು ಕೂಡಾ ಜನರೊಂದಿಗೆ (ಅವರು ಎಂತಹವರೇ ಆಗಿರಲಿ) ನಿರ್ಮಲ ಹೃದಯ, ಪ್ರೀತಿ ವಿಶ್ವಾಸ ಪೂರ್ಣ ನಡವಳಿಕೆಗಳನ್ನು ತೋರಿದರೆ ಅವರು ನಮ್ಮ ಕಡೆ ಆಕರ್ಷಿತರಾಗದಿರಲು ಯಾವುದೇ ಕಾರಣ ಉಳಿಯುವುದಿಲ್ಲ.

**ಉಪಸಂಹಾರ:**

**ವಿನಯ, ಮಾಧುರ್ಯ ಮತ್ತು ಪ್ರಾಮಾಣಿಕತೆಯಿಂದ ನಾವು ವರ್ತಿಸದೇ ಇರುವ ಪಕ್ಷದಲ್ಲಿ ನಾವಿಷ್ಟಪಡುವ ವಾತಾರವಣವನ್ನು ಸೃಷ್ಟಿಸುವುದು ಅಸಾಧ್ಯದ ಮಾತಾಗಿದೆ.**

# ನಿಮ್ಮ ಮಾತಿನ ಶೈಲಿ ಚೆನ್ನಾಗಿರಲಿ

ಹಿಂದಿನ ಲೇಖನದಿಂದ ಈ ವಿಷಯವನ್ನು ಪ್ರಸ್ತಾಪಿಸಲಾಗುತ್ತಿದೆ. ಜನರೊಂದಿಗೆ ಮಾತುಕತೆ ನಡೆಸುವಾಗ ನಮ್ಮ ಶೈಲಿ, ಹಾವಭಾವ ಹೇಗಿರಬೇಕು? ಯಾರೊಂದಿಗೆ ಎಂತಹ ವಿಷಯಗಳ ಕುರಿತು ಮಾತು ಆರಂಭಿಸಬೇಕು ಇತ್ಯಾದಿ ಇತ್ಯಾದಿ.

ನೀವು ನಿಮ್ಮ ಮಿತ್ರರು, ಸಹಪಾಠಿಗಳು, ಆತ್ಮೀಯರು ಅಥವಾ ಆಪ್ತ ಸಂಬಂಧಿಕರನ್ನು ಭೇಟಿಯಾದಾಗ ಅವರಿಗೆ ಸಂಬಂಧಪಟ್ಟ ವಿಷಯಗಳನ್ನು ಪ್ರಸ್ತಾಪಿಸುವುದು ಹೆಚ್ಚು ಸಮಂಜಸವೆನಿಸುತ್ತದೆ. ಅವರು ಇಷ್ಟಪಡುವ ವಿಷಯಗಳ ಕುರಿತು ನೀವು ಮಾತಾಡಿದಾಗ ಅವರಲ್ಲಿ ಸಂತೋಷ ಉಂಟಾಗುತ್ತದೆ. ಇದು ಮನುಷ್ಯನ ಪ್ರಕೃತಿಯ ಒಂದು ಭಾಗವಾಗಿದೆ. ಒಬ್ಬ ಯುವಕನು ಮಾತಾಡಲು ಇಷ್ಟಪಡುವ ವಿಷಯವು ಒಬ್ಬ ವೃದ್ಧನು ಮಾತಾಡಲು ಇಷ್ಟಪಡುವ ವಿಷಯಕ್ಕಿಂತ ಖಂಡಿತವಾಗಿಯೂ ವ್ಯತಿರಿಕ್ತವಾಗಿರುತ್ತದೆ. ಒಬ್ಬ ವಿದ್ವಾಂಸನೊಂದಿಗೆ ನೀವು ಪ್ರಸ್ತಾಪಿಸುವ ವಿಷಯವು ಒಬ್ಬ ಅಜ್ಞಾನಿಯೊಂದಿಗೆ ಮಾತಾಡುವ ವಿಷಯಕ್ಕೆ ಭಿನ್ನವಾಗಿರುತ್ತದೆ. ನೀವು ನಿಮ್ಮ ಪತ್ನಿಯೊಂದಿಗೆ ಮಾತಾಡುವ ವಿಷಯ ಮತ್ತು ನಿಮ್ಮ ಸಹೋದರಿಯರೊಂದಿಗೆ ಮಾತಾಡುವ ವಿಷಯವು ಬೇರೆ ಬೇರೆಯಾಗಿರುತ್ತದೆ.

ಇಲ್ಲಿ ನಾನು ಉದ್ದೇಶಿಸುವುದು ಎಲ್ಲಾ ವಿಷಯವು ಪರಸ್ಪರ ವ್ಯತಿರಿಕ್ತವಾಗಿರಬೇಕೆಂದಲ್ಲ. ಸಹೋದರಿಗೆ ಹೇಳುವ ವಿಷಯವನ್ನು ಪತ್ನಿಗೆ ಹೇಳಲೇಬಾರದೆಂದೋ, ಯುವಕರೊಂದಿಗೆ ಹೇಳುವ ಮಾತನ್ನು ವೃದ್ಧರಿಗೆ ಹೇಳಲೇಬಾರದೆಂದೂ ನಾನು ಹೇಳುತ್ತಿಲ್ಲ. ಬದಲಾಗಿ ಅವರವರಿಗೆ ಹೊಂದುವ, ಅವರು ಇಷ್ಟಪಡುವ ಮತ್ತು ಅವರಿಗೆ ಸಂಬಂಧಿಸಿದ ವಿಷಯಗಳನ್ನು ಮಾತಾಡುವಾಗಲೇ ಅವರಿಗೆ ಆ ಮಾತಿನಲ್ಲಿ ಆಸಕ್ತಿ ಉಂಟಾಗುತ್ತದೆ ಎನ್ನುವುದಾಗಿದೆ.

ಉದಾಹರಣೆ ಇಲ್ಲದೆ ನನ್ನ ಮಾತು ಅರ್ಥವಾಗಲಾರದು. ಉದಾಹರಣೆಗೆ ನಿಮ್ಮ ಅಜ್ಜನನ್ನು ಭೇಟಿಯಾಗಲು ನಿಮ್ಮ ಮನೆಗೆ ಕೆಲವು ಹಿರಿಯರು ಬರುತ್ತಾರೆಂದು ಇಟ್ಟುಕೊಳ್ಳಿ. ಅವರಿಗೆ 80 ವರ್ಷಕ್ಕಿಂತ ಹೆಚ್ಚು ಪ್ರಾಯವಾಗಿದೆ. ನೀವು ಅವರೊಂದಿಗೆ ನಿಮ್ಮ ಮಿತ್ರರೊಂದಿಗೆ ಪಿಕ್‌ನಿಕ್ ಹೋದ ಘಟನೆಯ ವಿಷಯವನ್ನು ಪ್ರಸ್ತಾಪಿಸುವುದು ಸಮಂಜಸವೆನಿಸುತ್ತದೆಯೇ? ಅಥವಾ ಯಾವುದೋ ಫುಟ್‌ಬಾಲ್ ಆಟಗಾರನ ಕ್ರೀಡಾ ಪ್ರೌಢಿಮೆಯ ಕುರಿತು ಚರ್ಚೆಯಲ್ಲಿ ತೊಡಗಿದರೆ ಸರಿಯೆನಿಸುತ್ತಿದೆಯೇ? ಖಂಡಿತವಾಗಿಯೂ ಅದು ಸಮಂಜಸವಲ್ಲ.

ನೀವು ಪುಟ್ಟ ಮಕ್ಕಳೊಂದಿಗೆ ಮಾತಾಡುವಾಗ ಪತಿ–ಪತ್ನಿಯರಿಗೆ ಸಂಬಂಧಿಸಿದ ವಿಷಯಗಳನ್ನು ಪ್ರಸ್ತಾಪಿಸುವುದು ಸರಿಯೆನಿಸುವುದಿಲ್ಲ. ಜನರಲ್ಲಿ ನಿಮ್ಮ ಕುರಿತು ಸದಾಭಿಪ್ರಾಯ ಉಂಟಾಗುವಂತೆ ಮಾಡಬೇಕಾದರೆ ನೀವು ಅವರೊಂದಿಗೆ ಮಾತಾಡುವಾಗ ಅವರು ಇಷ್ಟಪಡುವ ವಿಷಯವನ್ನು ಆಯ್ದುಕೊಳ್ಳಬೇಕಾಗುತ್ತದೆ.

ಒಬ್ಬ ತಂದೆ ತನ್ನ ಪುತ್ರನೊಂದಿಗೆ ಮಾತಾಡುವಾಗ ಅವನಿಗೆ ತಕ್ಕುದಾದ ವಿಷಯವನ್ನೇ ಪ್ರಸ್ತಾಪಿಸಬೇಕು. ಹಾಗೇ ನಿಮ್ಮ ಮಿತ್ರರೊಬ್ಬರು ಹೊಸ ಅಂಗಡಿಯನ್ನು ತೆರೆದು ಅದರಲ್ಲಿ ತುಂಬಾ ಲಾಭ ಸಂಪಾದಿಸಿದರೆಂದಾದರೆ ನೀವು ಅವರೊಂದಿಗೆ ಅವನ ಅಂಗಡಿಯ ಕುರಿತು ಪ್ರಸ್ತಾಪಿಸುತ್ತಾ "ನಿಮ್ಮ ಅಂಗಡಿ ಹೇಗೆ ನಡೆಯುತ್ತಾ ಇದೆ? ವ್ಯವಹಾರವು ಚೆನ್ನಾಗಿದೆ ತಾನೆ? ಎಷ್ಟು ವ್ಯಾಪಾರವಾಗುತ್ತದೆ? ಎಂದು ಮಾತಿಗೆ ತೊಡಗಿದರೆ ಅವರಿಗೆ ಸಂತೋಷವಾಗುತ್ತದೆ ಮತ್ತು ಅವರೂ ನಿಮ್ಮೊಂದಿಗೆ ಮಾತಾಡಲು ಇಷ್ಟಪಡುತ್ತಾರೆ.

ಪ್ರವಾದಿ (ಸ) ರು ಈ ವಿಷಯದ ಕುರಿತು ಬಹಳ ಎಚ್ಚರವಹಿಸುತ್ತಿದ್ದರು.

ಜಾಬಿರ್ ಬಿನ್ ಅಬ್ದುಲ್ಲಾ (ರ)ರವರ ಹೆಸರು ಪ್ರಮುಖ ಸಹಾಬಿಗಳಲ್ಲಿ ಪರಿಗಣಿಸಲ್ಪಡುತ್ತದೆ. ಉಹುದ್ ಯುದ್ಧದಲ್ಲಿ ಅವರ ತಂದೆ ಒಂಭತ್ತು ಹೆಣ್ಣು ಮಕ್ಕಳನ್ನು ಅಗಲಿ ಹುತಾತ್ಮರಾಗಿ ಹೋದರು. ಆ ಹೆಣ್ಮಕ್ಕಳಿಗೆ ಜಾಬಿರ್ (ರ) ರ ಹೊರತಾಗಿ ಬೇರೆ ಯಾವುದೇ ಆಶ್ರಯವಿರಲಿಲ್ಲ. ತಂದೆ ಅಬ್ದುಲ್ಲಾ ತುಂಬಾ ಸಾಲವನ್ನು ಮಾಡಿದ್ದರು. ಈಗ ಅದರ ಭಾರವೂ ಅವರ ಯುವ ಪುತ್ರ ಜಾಬಿರ್ (ರ) ರವರೇ ಹೊರಬೇಕಾಯಿತು. ಜಾಬಿರ್ (ರ) ಯಾವಾಗಲೂ ಸಾಲ ಮತ್ತು ತನ್ನ ಸಹೋದರಿಯರ ವಿಷಯದಲ್ಲಿ ಚಿಂತಿಸುತ್ತಿದ್ದರು. ಸಾಲಗಾರರು ದಿನನಿತ್ಯ ಅವರಿಗೆ ಸಾಲದ ವಿಷಯದಲ್ಲಿ ತೊಂದರೆ ಕೊಡುತ್ತಿದ್ದರು.

ಮುಸಲ್ಮಾನರು ಪ್ರವಾದಿ (ಸ)ರೊಂದಿಗೆ "ಝಾತುರಿಕಾಅ್" ಯುದ್ಧಕ್ಕೆ ಹೊರಟರು. ಜಾಬಿರ್ (ರ) ಕೂಡಾ ಅವರೊಂದಿಗಿದ್ದರು. ಬಡವರಾದ ಅವರ ಸವಾರಿ (ಒಂಟೆ)ಯು ತುಂಬಾ ದುರ್ಬಲವಾಗಿತ್ತು. ಅದು ಮುಂದೆ ಹೆಜ್ಜೆ ಇಡುವುದಕ್ಕೆ ಹಿಂಜರಿಯುತ್ತಿತ್ತು. ಎಲ್ಲರೂ ಜಾಬಿರ್ (ರ) ರವರಿಗಿಂತ ಮುಂದೆ ಸಾಗಿದರು. ಅವರು ಬಹಳ ಹಿಂದೆ ಉಳಿದು ಬಿಟ್ಟರು. ಪ್ರವಾದಿ ವರ್ಯರು(ಸ) ಯಾವಾಗಲೂ ತಮ್ಮ ತಂಡದ ಹಿಂದಿನಿಂದ ಬರುವುದು ವಾಡಿಕೆಯಾಗಿತ್ತು. ಅವರಿಗೆ ಜಾಬಿರ್ (ರ)ರವರ ತಡವರಿಸುತ್ತಾ ನಡೆಯುವ ಒಂಟೆಯು ಗೋಚರಿಸಿದಾಗ ಅವರ ಬಳಿಗೆ ಬಂದು ಕೇಳಿದರು :

"ಜಾಬಿರ್! ಏನಾಯಿತು?"

"ಅಲ್ಲಾಹನ ಸಂದೇಶವಾಹಕರೇ, ನನ್ನ ಒಂಟೆ ಹಿಂದೆ ಉಳಿದು ಬಿಟ್ಟಿದೆ". ಜಾಬಿರ್ (ರ) ಬಹಳ ವಿಷಾದಕರವಾಗಿ ಉತ್ತರಿಸಿದರು.

ಪ್ರವಾದಿ (ಸ) ಹೇಳಿದರು :

"ಸರಿ, ಸ್ವಲ್ಪ ಅದನ್ನು ಕೂರಿಸು".

ಅವರು ಅದನ್ನು ಕೂರಿಸಿದರು, ಪ್ರವಾದಿ (ಸ) ರು ಕೂಡಾ ಅವರ ಒಂಟೆಯನ್ನು ಅದರ ಸಮೀಪದಲ್ಲಿ ಕೂರಿಸಿದರು.

ಅವರು ಜಾಬಿರ್ (ರ) ರೊಂದಿಗೆ ಹೇಳಿದರು :

"ಸ್ವಲ್ಪ ನಿಮ್ಮ ಲಾಠಿ ಕೊಡಿ"

ಅವರು ಲಾಠಿಯನ್ನು ಪ್ರವಾದಿ (ಸ) ರ ಕೈಗಿಟ್ಟರು. ಪ್ರವಾದಿ (ಸ) ಆ ಲಾಠಿಯಿಂದ ಒಂಟೆಗೆ ಹಗುರವಾಗಿ ಹೊಡೆದರು. ತುಸು ಹಿಂದೆ ಹೆಜ್ಜೆ ಹಾಕಲು ಹಿಂಜರಿಯುತ್ತಿದ್ದ ಒಂಟೆಯು ಒಮ್ಮೆಗೆ ನೆಗೆದು ನಿಂತುಕೊಂಡಿತು ಮತ್ತು ಓಡಲಾರಂಭಿಸಿತು. ಅದರ ಅಂಗಗಳಲ್ಲಿ ಚೈತನ್ಯವು ಉಕ್ಕಿ ಬಂತು. ಜಾಬಿರ್ (ರ) ಓಡುತ್ತಾ ಹೋಗಿ ಒಂಟೆಯ ಕೊರಳನ್ನು ಹಿಡಿದು ಜಿಗಿದು ಅದರ ಮೇಲೆ ಏರಿಕೊಂಡರು. ಅದು ಪ್ರವಾದಿ (ಸ)ರ ಒಂಟೆಯ ಜೊತೆಯಾಗಿ ಓಡಲಾರಂಭಿಸಿತು.

ಜಾಬಿರ್ (ರ) ತನ್ನ ದುರ್ಬಲ ಮತ್ತು ನಿರುಪಯುಕ್ತ ಒಂಟೆಯ ಚುರುಕಿನಿಂದ ಓಡುತ್ತಿರುವುದನ್ನು ಕಂಡು ಸಂತೋಷಗೊಂಡರು. ಪ್ರವಾದಿ (ಸ) ರಿಗೆ ಜಾಬಿರ್ (ರ)ರೊಂದಿಗೆ ಮಾತಾಡಬೇಕೆನಿಸಿತು. ಜಾಬಿರ್ (ರ) ನವ ಯುವಕರಾಗಿದ್ದರು. ಯುವಕರ ಚಿತ್ತವು ಸಾಮಾನ್ಯವಾಗಿ ಮದುವೆ ಮತ್ತು ಉಪ ಜೀವನದ ಕುರಿತಾಗಿಯೇ ಆಲೋಚಿಸುತ್ತಿರುತ್ತದೆ.

ಪ್ರವಾದಿ (ಸ) ರು ಅಲ್ಲಿಂದಲೇ ಮಾತನ್ನು ಪ್ರಾರಂಭಿಸಿದರು.

"ಜಾಬಿರ್! ನಿಮ್ಮ ಮದುವೆ ಆಯಿತೇ?"

ಜಾಬಿರ್ (ರ) ಮಂದಹಾಸ ಬೀರುತ್ತಾ ಉತ್ತರಿಸಿದರು "ಹೌದು"

ಪ್ರವಾದಿ (ಸ) ಕೇಳಿದರು;

"ಹೆಣ್ಣು ಕನ್ಯೆಯೇ ಅಥವಾ ವಿವಾಹಿತಳೇ?"

"ವಿವಾಹಿತೆ"

ಪ್ರವಾದಿ (ಸ)ರಿಗೆ ಆಶ್ಚರ್ಯವಾಯಿತು. ನವ ಯುವಕರು ಸಾಮಾನ್ಯವಾಗಿ ಪ್ರಥಮ ಮದುವೆಗೆ ಕನ್ಯೆಯರನ್ನೇ ಆಯ್ದುಕೊಳ್ಳುತ್ತಾರೆ. ಪ್ರವಾದಿ (ಸ) ಕುತೂಹಲದಿಂದ ಕೇಳಿದರು :

"ಕನ್ಯೆ ಸ್ತ್ರೀಯೊಂದಿಗೆ ಮದುವೆ ಆಗಿದ್ದಿದ್ದರೆ ಅವಳು ನಿನ್ನೊಂದಿಗೆ ಆಟ ಆಡುತ್ತಿದ್ದಳು ಮತ್ತು ನಿನಗೆ ಅವಳ ಸೊಬಗನ್ನು ಸವಿಯಬಹುದಾಗಿತ್ತು.❶

ಜಾಬಿರ್ (ರ) ಕಾರಣವನ್ನು ಬಹಿರಂಗಗೊಳಿಸುತ್ತಾ ಹೇಳಿದರು : "ಅಲ್ಲಾಹನ ಸಂದೇಶವಾಹಕರೇ, ನನ್ನ ತಂದೆ ಉಹುದ್ ಯುದ್ಧದಲ್ಲಿ ಅವರ ಒಂಭತ್ತು ಹೆಣ್ಣು ಮಕ್ಕಳನ್ನು ಅಗಲಿ ರಕ್ತ ಸಾಕ್ಷಿಯಾಗಿ ಹೋದ ವಿಷಯ ನಿಮಗೆ ತಿಳಿದೇ ಇದೆ. ಆ ಹೆಣ್ಣು ಮಕ್ಕಳಿಗೆ ನನ್ನ ಹೊರತು ಬೇರೆ ಯಾರೂ ಇಲ್ಲ. ಅವರದೇ ವಯಸ್ಸಿನ ಇನ್ನೊಂದು ಹೆಣ್ಣನ್ನು ನಾನು ಮದುವೆಯಾಗಿ ತರುವುದು ನನಗೆ ಸರಿ ಕಾಣಲಿಲ್ಲ. ಅವರು ಪರಸ್ಪರ ಜಗಳವಾಡುತ್ತಾ, ಹೊಡೆದಾಡುತ್ತಾ ಇರಬಹುದೆಂಬ ಆಶಂಕೆ ನನಗೆ ಉಂಟಾಯಿತು. ಆದ್ದರಿಂದ ನಾನು ಹಿರಿಯ ವಯಸ್ಸಿನ ಹೆಂಗಸನ್ನು ಮದುವೆಯಾದೆ. ಅವಳು ತಾಯಿಯಂತೆ ನನ್ನ ಸಹೋದರಿಯರ ಪರಿಪಾಲನೆ ಮಾಡುತ್ತಾಳೆ ಮತ್ತು ಅವರ ತಲೆಬಾಚುತ್ತಾಳೆ

ಮತ್ತು ಅವರನ್ನು ಸ್ವಚ್ಛವಾಗಿ ಇಡುತ್ತಾಳೆ."

ಪ್ರವಾದಿ (ಸ)ರಿಗೆ ಅವರ ಮುಂದೆ ತನ್ನ ಸಹೋದರಿಯರಿಗಾಗಿ ತನ್ನ ಯೌವ್ವನದ ಅಭಿಲಾಷೆಗಳನ್ನು ತ್ಯಾಗ ಮಾಡಿದ ಓರ್ವ ಯುವಕ ನಿಂತುಕೊಂಡಂತೆ ಭಾಸವಾಯಿತು. ಅವರು ಜಾಬಿರ್ (ರ) ರವರನ್ನು ಉದ್ದೇಶಿಸಿ ಹೇಳಿದರು : "ನಾವು ಮದೀನಾದ ಬಳಿ ತಲುಪಿ ಕಣಿವೆಯಲ್ಲಿ ಬೀಡು ಬಿಡೋಣ ಮತ್ತು ನಿನ್ನ ಪತ್ನಿಗೆ ನಮ್ಮ ಆಗಮನದ ಸುದ್ಧಿ ತಿಳಿಯಲಿ. ಅವಳು ನಿನಗಾಗಿ ದಿಂಬನ್ನು ಸಿದ್ಧಗೊಳಿಸಲಿ".

ಜಾಬಿರ್ (ರ)ರವರಿಗೆ ಅವರ ಮತ್ತು ಅವರ ಸಹೋದರಿಯರ ಅಸಹಾಯಕತೆಯು ಜ್ಞಾಪಕಕ್ಕೆ ಬಂತು. ಅವರು ತಕ್ಷಣ ಹೇಳಿದರು.

"ದಿಂಬು! ಅಲ್ಲಾಹನ ಸಂದೇಶವಾಹಕರೇ! ಅಲ್ಲಾಹನಾಣೆ! ನಮ್ಮ ಬಳಿ ಯಾವುದೇ ದಿಂಬು ಇರುವುದಿಲ್ಲ".

ಪ್ರವಾದಿ (ಸ) ಉತ್ತರಿಸುತ್ತಾ ಹೇಳಿದರು :

"ನಿಮ್ಮ ಬಳಿ ದಿಂಬು ಇರುವುದು ಇನ್‌ಶಾಅಲ್ಲಾಹ್"

ಅವರಿಬ್ಬರು ಮುಂದೆ ಸಾಗುತ್ತಲೇ ಇದ್ದರು.

ಪ್ರವಾದಿ (ಸ) ಜಾಬಿರ್ (ರ) ರಿಗೆ ಆರ್ಥಿಕ ಸಹಾಯ ನೀಡಲು ಬಯಸಿದರು. ಅವರು ಮತ್ತೆ ಜಾಬಿರ್ (ರ) ಕಡೆಗೆ ತಿರುಗಿ ಹೇಳಿದರು :

"ಜಾಬಿರ್! ನಿಮ್ಮ ಒಂಟೆಯನ್ನು ನನಗೆ ಮಾರುವಿರಾ?"

ಜಾಬಿರ್ ಆಲೋಚನೆಯಲ್ಲಿ ಬಿದ್ದರು. ಈ ಒಂಟೆಯು ಅವರ ಏಕೈಕ ಸಂಪತ್ತಾಗಿತ್ತು. ಮೊದಲು ಅಪ್ರಯೋಜಕವೆಂದು ಕಂಡರೂ ಈಗ ಗಟ್ಟಿಯಾಗಿಯೇ ಇದೆ. ಮತ್ತೆ ಜಾಬಿರ್ (ರ) ಆಲೋಚಿಸಿದರು. ಪ್ರವಾದಿ (ಸ) ಅಪೇಕ್ಷೆಯನ್ನು ಅವಗಣಿಸುವುದಾದರೂ ಹೇಗೆ? ಅದು ಅಸಾಧ್ಯವಾದ ಮಾತು.

ಅವರು ಹೇಳಿದರು, "ಅಲ್ಲಾಹನ ಸಂದೇಶವಾಹಕರೇ! ಸರಿ, ನೀವು ಎಷ್ಟಕ್ಕೆ ಇದನ್ನು ಖರೀದಿಸುತ್ತೀರಿ ಹೇಳಿ ;

ಪ್ರವಾದಿ (ಸ) ಹೇಳಿದರು ; ಒಂದು ದಿರ್ಹಮ್

ಜಾಬಿರ್ (ರ) ಆಶ್ಚರ್ಯಚಕಿತರಾಗಿ ಕೇಳಿದರು ; "ಕೇವಲ ಒಂದು ದಿರ್ಹಮ್! ಯಾ ರಸೂಲುಲ್ಲಾಹ್! ನೀವು ನನಗೆ ತುಂಬಾ ನಷ್ಟ ಮಾಡುತ್ತಿದ್ದೀರಿ."

ಪ್ರವಾದಿ (ಸ) ಅದರ ಬೆಲೆ ಏರಿಸುತ್ತಾ ; "ಹೋಗು ಎರಡು ದಿರ್ಹಮ್ ಕೊಡುತ್ತೇನೆ."

"ಇಲ್ಲ ಅಲ್ಲಾಹನ ಸಂದೇಶವಾಹಕರೇ ನನಗೆ ತುಂಬಾ ನಷ್ಟವಾಗುತ್ತದೆ".

ಪ್ರವಾದಿ (ಸ) ಬೆಲೆ ಏರಿಸುತ್ತಲೇ ಹೋದರು. ಈಗ ಮಾತು ನಲ್ವತ್ತು ದಿರ್ಹಮ್

ತನಕ ತಲುಪಿತು.

ಜಾಬಿರ್ (ರ) ಸಂತೃಪ್ತರಾಗಿ ಹೇಳಿದರು ; "ಈಗ ಸರಿಯಾಯಿತು. ಆದರೆ ಒಂದು ಶರತ್ತು ಇದೆ. ನಾನು ಮದೀನಾ ತಲುಪುವ ತನಕ ಇದರಲ್ಲೇ ಸವಾರಿ ಮಾಡುತ್ತೇನೆ."

ಮುಸ್ಲಿಮರ ತಂಡ ಮದೀನಾ ತಲುಪಿದಾಗ ಜಾಬಿರ್ (ರ) ತನ್ನ ಮನೆಗೆ ಹೋದರು ಮತ್ತು ಒಂಟೆಯ ಮೇಲಿನಿಂದ ಅವರ ಸಾಮಾನನ್ನು ಕೆಳಗಿಳಿಸಿದ ಬಳಿಕ ನೆಬಿ (ಸ)ರ ಹಿಂದೆ ನಮಾಝ್ ನಿರ್ವಹಿಸಲು ಮಸೀದಿಗೆ ಬಂದರು ಮತ್ತು ಒಂಟೆಯನ್ನು ಮಸೀದಿಯ ಬಳಿ ಕಟ್ಟಿದರು. ನೆಬಿ (ಸ) ವರ್ಯರು ನಮಾಝಿನ ಬಳಿಕ ಮಸೀದಿಯಿಂದ ಹೊರಬಂದಾಗ ಜಾಬಿರ್ (ರ) ಹೇಳಿದರು : "ಅಲ್ಲಾಹನ ಸಂದೇಶ ವಾಹಕರೇ! ಇದೋ ನಿಮ್ಮ ಒಂಟೆ ಸಿದ್ಧವಾಗಿದೆ".

ಪ್ರವಾದಿ (ಸ) ಬಿಲಾಲ್ (ರ) ರವರಿಗೆ ಆಜ್ಞಾಪಿಸುತ್ತಾ "ಜಾಬಿರ್ (ರ) ರವರಿಗೆ ನಲ್ವತ್ತು ದಿರ್ಹಮ್‌ಗಿಂತ ಸ್ವಲ್ಪ ಹೆಚ್ಚೇ ಕೊಟ್ಟುಬಿಡಿರಿ"❷ಎಂದರು.

ಬಿಲಾಲ್ (ರ) ಆದೇಶವನ್ನು ಪಾಲಿಸುತ್ತಾ ನಲ್ವತ್ತು ದಿರ್ಹಮ್‌ಗಿಂತ ಸ್ವಲ್ಪ ಹೆಚ್ಚು ಮೊತ್ತವನ್ನು ಜಾಬಿರ್ (ರ) ರಿಗೆ ನೀಡಿದರು.

ಜಾಬಿರ್ (ರ) ಹಣ ಪಡೆದುಕೊಂಡು ಮರಳುವ ದಾರಿಯಲ್ಲಿ ಈ ಹಣದಿಂದ ಮಾಡುವುದಾದರೂ ಏನು? ಹೊಸ ಒಂಟೆಯನ್ನು ಖರೀದಿಸುವುದೇ ಅಥವಾ ಮನೆಗೆ ಸಾಮಾನುಗಳನ್ನು ಕೊಂಡೊಯ್ಯುವುದೇ ಎಂದು ಆಲೋಚನೆ ಮಾಡತೊಡಗಿದರು.

ಅತ್ತ ಪ್ರವಾದಿ (ಸ)ರು ಬಿಲಾಲ್(ರ) ರೊಂದಿಗೆ ಹೇಳಿದರು, "ಈ ಒಂಟೆಯನ್ನು ಹಿಡಿದುಕೊಂಡು ಹೋಗಿ ಜಾಬಿರ್ (ರ) ಕೊಟ್ಟು ಬಾ".

ಬಿಲಾಲ್(ರ) ಒಂಟೆಯ ಮೂಗುದಾರವನ್ನು ಹಿಡಿದುಕೊಂಡು ಜಾಬಿರ್ (ರ) ರವರ ಬಳಿ ಬಂದರು. ಜಾಬಿರ್ (ರ) ರಿಗೆ ಬಿಲಾಲ್ (ರ) ಒಂಟೆಯೊಂದಿಗೆ ಬರುತ್ತಿರುವುದನ್ನು ನೋಡಿ ಆಶ್ಚರ್ಯವಾಯಿತು. ವ್ಯಾಪಾರ ತಿರಸ್ಕೃತವಾಗಿರಬೇಕೆಂದುಕೊಂಡರು.

ಬಿಲಾಲ್(ರ) ಸಮೀಪಿಸುತ್ತಲೇ ಹೇಳಿದರು ; "ಜಾಬಿರ್, ಒಂಟೆಯನ್ನು ತೆಗೆದುಕೊಳ್ಳಿರಿ."

ಜಾಬಿರ್(ರ) ಆಶ್ಚರ್ಯದಿಂದ ಕೇಳಿದರು, "ಏನಾಯಿತು?"

ಬಿಲಾಲ್ (ರ) ಹೇಳಿದರು : "ನೆಬಿ ವರ್ಯರು ಈ ಒಂಟೆಯನ್ನು ನಿಮಗೆ ಕೊಟ್ಟು ಬರಲು ನನಗೆ ಆಜ್ಞಾಪಿಸಿರುವರು ಮತ್ತು ಅದರ ಹಣ ಕೂಡಾ ನಿಮ್ಮ ಬಳಿಯೇ ಇರಲಿ ಎಂದಿರುವರು".

ಇದನ್ನು ಕೇಳಿ ಜಾಬಿರ್ (ರ) ಪ್ರವಾದಿ (ಸ) ಸನ್ನಿಧಿಗೆ ಹೋಗಿ ಕೇಳಿದರು ; "ಇದೇನು ವಿಷಯ? ನಿಮಗೆ ಒಂಟೆಯ ಅವಶ್ಯಕತೆ ಇಲ್ಲವೇ?"

ಪ್ರವಾದಿ ವರ್ಯರು ನಸುನಗುತ್ತಾ ಹೇಳಿದರು ; "ನಾನು ನಿಮ್ಮೊಂದಿಗೆ ಚೌಕಾಶಿ

ಮಾಡಿದ್ದು ನಿಮ್ಮ ಒಂಟೆಯನ್ನು ಪಡೆದುಕೊಳ್ಳಲಿಕ್ಕೆಂದು ಭಾವಿಸಿದ್ದೀರಾ!”❸

ಅಂದರೆ ನಾನು ಚೌಕಾಶಿ ನಡೆಸಿದ್ದು ನಿಮ್ಮ ಒಂಟೆಯನ್ನು ಅಗ್ಗ ಬೆಲೆಗೆ ಪಡೆದುಕೊಳ್ಳಬೇಕೆಂದಲ್ಲ. ಬದಲಾಗಿ ನಿಮಗೆ ಅತ್ಯಾವಶ್ಯಕವಿರುವ ಹಣವೆಷ್ಟು ಎಂದು ತಿಳಿದು ನಿಮಗೆ ಸಹಾಯ ಮಾಡಬೇಕೆಂದಾಗಿದೆ.

ಇದು ಅತೀ ಉತ್ಕೃಷ್ಟ ಸ್ವಭಾವದ ಮಾದರಿಯಾಗಿದೆ. ಪ್ರವಾದಿವರ್ಯರು ಯುವಕನಿಗೆ ಅತ್ಯಂತ ಒಪ್ಪಿಗೆಯಾಗುವಂತಹಾ ಕುರಿತು ಮಾತು ಪ್ರಾರಂಭಿಸಿದರು ಮತ್ತು ಅವನಿಗೆ ಸಹಾಯ ನೀಡಲು ಬಯಸಿದಾಗ ಮನಮೋಹಕ ಶೈಲಿಯನ್ನು ಆಯ್ದುಕೊಂಡರು.

ಒಂದು ದಿನ ಜುಲಿಬೀಬ್ ಎಂಬ ಹೆಸರಿನ ಯುವ ಸ್ವಹಾಬಿಯೋರ್ವರು ಪ್ರವಾದಿ (ಸ) ಸನ್ನಿಧಿಯಲ್ಲಿ ಹಾಜರಾದರು. ಅವರು ಯುವಕರು, ಒಳ್ಳೆಯ ನಡವಳಿಕೆಯವರು ಮತ್ತು ಅಪೂರ್ವ ವ್ಯಕ್ತಿತ್ವವಿರುವ ಸ್ವಹಾಬಿಗಳಲ್ಲಿ ಒಬ್ಬರಾಗಿದ್ದರು. ಜುಲಿಬೀಬ್ ಸೌಂದರ್ಯವಂತರಲ್ಲ. ಪ್ರವಾದಿ (ಸ) ಅವರೊಂದಿಗೆ ವಿವಾಹದ ಕುರಿತು ಪ್ರಸ್ತಾಪಿಸಿದರು. ಅವರು ನಿರಾಶಾಜನಕರಾಗಿ ಉತ್ತರಿಸಿದರು. ಪ್ರವಾದಿ (ಸ)ರು ನಾನು ನಿನಗೆ ವಧುವನ್ನು ಅನ್ವೇಷಿಸುತ್ತೇನೆಂದು ಹೇಳಿದಾಗ, ಅವರು ಮಂದಹಾಸ ಬೀರುತ್ತಾ ; “ನಿಮಗೆ ನನ್ನಿಂದ ಹೆಚ್ಚು ಬೆಲೆ ಸಿಗಲಿಕ್ಕಿಲ್ಲ” ಎಂದರು.

ಪ್ರವಾದಿ (ಸ) ಹೇಳಿದರು : “ಆದರೆ ನೀನು ಅಲ್ಲಾಹನ ಬಳಿ ಕಡಿಮೆ ಬೆಲೆ ಇರುವವನೇನು ಅಲ್ಲ”.

ಪ್ರವಾದಿ (ಸ) ಜುಲಿಬೀಬ್‌ರವರಿಗೆ ವಧುವಿನ ಅನ್ವೇಷಣೆಯಲ್ಲಿದ್ದಾಗ ಒಬ್ಬ ಅನ್ಸಾರಿ ತನ್ನ ವಿಚ್ಛೇದಿತ ಪುತ್ರಿಯ ಸಂಬಂಧವನ್ನು ಪ್ರವಾದಿ (ಸ)ರಿಗೆ ಮಾತಾಡಲು ಬಂದರು. ಪ್ರವಾದಿ (ಸ) ಆ ಸಂಬಂಧವನ್ನು ತಿರಸ್ಕರಿಸುತ್ತಾ ಹೇಳಿದರು. “ಸದ್ಯ ನಾನು ವಿವಾಹಕ್ಕೆ ಸಿದ್ಧನಿಲ್ಲ. ಆದರೆ ನಿಮ್ಮ ಪುತ್ರಿಯ ವಿವಾಹವನ್ನು ಬೇರೊಬ್ಬರೊಂದಿಗೆ ಮಾಡಿಸಬಲ್ಲೆ”.

ಅನ್ಸಾರಿ ವಿಚಾರಿಸಿದರು : “ಯಾರೊಂದಿಗೆ”?

ಪ್ರವಾದಿ (ಸ) ಹೇಳಿದರು : “ಜುಲಿಬೀಬ್‌ರೊಂದಿಗೆ”....

ಆ ವ್ಯಕ್ತಿ ಆಶ್ಚರ್ಯಚಕಿತರಾಗಿ ಹೇಳಿದರು : “ಜುಲಿಬೀಬ್! ಜುಲಿಬೀಬ್‌ರೊಂದಿಗೆಯೇ? ಅಲ್ಲಾಹನ ಸಂದೇಶವಾಹಕರೇ, ನಾನು ನನ್ನ ಪತ್ನಿಯೊಂದಿಗೆ ಈ ಕುರಿತು ವಿಚಾರಿಸಿಕೊಂಡು ಬಂದು ನಿಮಗೆ ತಿಳಿಸುತ್ತೇನೆ.”

ಅನ್ಸಾರಿ ಮನೆಗೆ ಬಂದರು. ಪತ್ನಿಯೊಂದಿಗೆ ಹೇಳಿದರು, ಪ್ರವಾದಿ ವರ್ಯರು (ಸ) ನಿನ್ನ ಪುತ್ರಿಯ ಸಂಬಂಧವನ್ನು ಬಯಸುತ್ತಾರೆ.

ಪತ್ನಿ ಉತ್ತರವಾಗಿ ಹೇಳಿದಳು : “ಬಹಳ ಒಳ್ಳೆಯ ಮಾತು. ಅವಳನ್ನು ಪ್ರವಾದಿವರ್ಯರಿಗೆ (ಸ) ವಿವಾಹ ಮಾಡಿಕೊಡಿರಿ”.

“ಆದರೆ ಅವರು ಅವರಿಗಾಗಿ ಕೇಳುತ್ತಿಲ್ಲ”.

"ಇನ್ನಾರಿಗಾಗಿ?"

"ಅವರು ಜುಲಿಬೀಬ್‌ಗಾಗಿ ನಮ್ಮ ಪುತ್ರಿಯ ವಿವಾಹ ಪ್ರಸ್ತಾಪ ಮಾಡುತ್ತಿದ್ದಾರೆ". ಇಷ್ಟು ಕೇಳಿದ್ದೇ ತಡ ಆ ಸ್ತ್ರೀ ವಿಲಾಪಿಸತೊಡಗಿದರು. ಅವಳು ಗೋಗರೆಯುತ್ತಾ ಹೇಳಿದಳು. "ನಾನು ಸತ್ತೇ ಹೋದೆ, ನಾಶವಾಗಿ ಬಟ್ಟೆ, ಜುಲಿಬೀಬ್‌ಗಾಗಿಯೇ! ಇಲ್ಲ, ಅಲ್ಲಾಹನಾಣೆ! ಜುಲಿಬೀಬ್‌ಗಾಗಿ ನಾನು ನನ್ನ ಪುತ್ರಿಯ ಒಂದು ಕೂದಲನ್ನೂ ಕಿತ್ತು ಕೊಡಲಾರೆ. ನಾವು ಎಂತೆಂತವರ ವಿವಾಹ ಪ್ರಸ್ತಾಪವನ್ನು ತಿರಸ್ಕರಿಸಿದವರು".

ಅನ್ಸಾರಿಗೆ ತನ್ನ ಪತ್ನಿಯ ತೀರ್ಮಾನದಿಂದ ನೋವಾಯಿತು. ಅವರು ಅಲ್ಲಿಂದ ಎದ್ದು ಹೊರ ನಡೆಯತೊಡಗಿದಾಗ ಅವರ ಪುತ್ರಿ ಪರದೆಯ ಒಳಗಿನಿಂದ ಹೇಳಿದಳು. "ನನ್ನ ಸಂಬಂಧವನ್ನು ಪ್ರಸ್ತಾಪಿಸಿದವರು ಯಾರು?"

ಮಾತಾಪಿತರು ಉತ್ತರಿಸಿದರು : "ಅಲ್ಲಾಹನ ಸಂದೇಶವಾಹಕರು".

ಹೆಣ್ಣು ಬೇಸರದಿಂದ ಹೇಳಿದಳು : "ನೀವು ಅಲ್ಲಾಹನ ಸಂದೇಶವಾಹಕರ ಪ್ರಸ್ತಾಪವನ್ನು ಹೇಗೆ ತಿರಸ್ಕರಿಸುತ್ತೀರಿ? ನನ್ನನ್ನು ಪ್ರವಾದಿವರ್ಯರಿಗೆ (ಸ) ಒಪ್ಪಿಸಿಬಿಡಿರಿ. ಅವರೆಂದಿಗೂ ನನ್ನನ್ನು ಹತಾಶಗೊಳಿಸಲಾರರು".

ಹೆಣ್ಣಿನ ಮಾತು ಕೇಳಿ ತಂದೆ-ತಾಯಿ ಸಂತೃಪ್ತರಾದರು. ಅವಳ ತಂದೆ ಪ್ರವಾದಿವರ್ಯರ (ರ) ಬಳಿ ಬಂದು ಹೇಳಿದರು : "ನಿಮ್ಮ ಇಚ್ಛೆಯಂತೇ ಆಗಲಿ. ನಾನು ನನ್ನ ಪುತ್ರಿಯನ್ನು ಜುಲಿಬೀಬ್‌ಗೆ ನಿಕಾಹ್ ಮಾಡಿ ಕೊಡಲು ಸಿದ್ಧನಿದ್ದೇನೆ".

ಅದರಿಂದ ಪ್ರವಾದಿ (ಸ) ಸಂತೋಷಗೊಂಡರು ಮತ್ತು ಆ ಹೆಣ್ಣನ್ನು ಜುಲಿಬೀಬ್‌ಗೆ ನಿಕಾಹ್ ಮಾಡಿಕೊಟ್ಟು ದಂಪತಿಗಳಿಗಾಗಿ ಈ ರೀತಿ ಪ್ರಾರ್ಥಿಸಿದರು :

«اللّٰهُمَّ صُبَّ عَلَيْهِمَا الْخَيْرَ صَبًّا وَّ لَا تَجْعَلْ عَيْشَهُمَا كَدًّا»

**"ಅಲ್ಲಾಹನೇ! ಇವರಿಬ್ಬರ ಮೇಲೆ ಕ್ಷೇಮ ಮತ್ತು ಸಮೃದ್ಧಿಯ ಹೊನಲು ಹರಿಸು ಮತ್ತು ಇವರ ಜೀವನವನ್ನು ಕಠಿಣಗೊಳಿಸಬೇಡ".**

ಜುಲಿಬೀಬ್ ಮದುವೆ ಆಗಿ ಕೆಲವು ದಿನಗಳಷ್ಟೇ ಕಳೆದಿತ್ತು. ಪ್ರವಾದಿ (ಸ) ತನ್ನ ಸಹವರ್ತಿಗಳೊಂದಿಗೆ ಒಂದು ಯುದ್ಧಕ್ಕೆ ಹೊರಟರು. ಜುಲಿಬೀಬ್ (ರ) ಕೂಡಾ ಧರ್ಮಯೋಧರ ಕೂಟದಲ್ಲಿ ಓರ್ವರಾಗಿದ್ದರು. ಯುದ್ಧ ಕೊನೆಗೊಂಡಾಗ ಜನರು ಅವರವರ ಸಂಬಂಧಿಕರನ್ನು ಹುಡುಕತೊಡಗಿದರು. ಪ್ರವಾದಿವರ್ಯರು ಕೆಲವರು ಯುದ್ಧದ ಮೈದಾನದಲ್ಲಿ ಯಾರನ್ನೋ ಹುಡುಕುತ್ತಿರುವುದನ್ನು ಕಂಡು "ಯಾರನ್ನು ಹುಡುಕುತ್ತಿದ್ದೀರಿ?" ಎಂದು ಕೇಳಿದರು.

ಅವರು ಹೇಳಿದರು : "ನಾವು ಇಂತಿಂತಹ ವ್ಯಕ್ತಿಗಾಗಿ ಹುಡುಕುತ್ತಿದ್ದೇವೆ".

ಪ್ರವಾದಿ (ಸ) ಸ್ವಲ್ಪ ಸಮಯ ಸುಮ್ಮನಿದ್ದರು ಮತ್ತೆ ಕೇಳಿದರು :

"ಯಾರಿಗಾಗಿ ಹುಡುಕುತ್ತಿದ್ದೀರಿ"?

ಜನರು ಹಿಂದಿನ ಉತ್ತರವನ್ನೇ ಪುನರಾವರ್ತಿಸಿದರು.

ಪ್ರವಾದಿ (ಸ) ಸ್ವಲ್ಪ ಸಮಯ ಮೌನ ತಾಳಿದರು. ಮತ್ತೇ ಅದೇ ಪ್ರಶ್ನೆಯನ್ನು ಪುನರಾವರ್ತಿಸುತ್ತಾ "ನೀವು ಯಾರಿಗಾಗಿ ಅನ್ವೇಷಣೆ ನಡೆಸುತ್ತಿದ್ದೀರಿ" ಎಂದು ಕೇಳಿದಾಗ ಜನರು ಅದೇ ಉತ್ತರವನ್ನು ಕೊಟ್ಟರು. ಆಗ ಪ್ರವಾದಿ (ಸ) ಹೇಳಿದರು "ಆದರೆ ನಾನು ಜುಲಿಬೀಬ್‌ರನ್ನು ಹುಡುಕುತ್ತಿದ್ದೇನೆ".

ಈಗ ಎಲ್ಲರೂ ಜುಲಿಬೀಬ್‌ರ ಅನ್ವೇಷಣೆಯಲ್ಲಿ ತೊಡಗಿದರು. ಹತರಾದವರಲ್ಲಿ ಹುಡುಕಿದಾಗ ಅವರು ಸಿಗಲಿಲ್ಲ. ಬಳಿಕ ರಣಾಂಗದ ಮಧ್ಯೆ ಒಂದು ಸ್ಥಳದಲ್ಲಿ ಹತರಾದ ಏಳು ಮುಶ್ರಿಕರ ಮಧ್ಯೆ ಜುಲಿಬೀಬ್‌ರ ಮೃತದೇಹವು ಪತ್ತೆಯಾಯಿತು. ಆ ಏಳು ಮುಶ್ರಿಕರನ್ನು ಜುಲಿಬೀಬ್ ವಧಿಸಿದ್ದರು ಮತ್ತು ಜುಲಿಬೀಬ್‌ರನ್ನು ಆ ಮುಶ್ರಿಕರು ಹತ್ಯೆಗೈದಿದ್ದರು.

ಪ್ರವಾದಿ (ಸ) ಜುಲಿಬೀಬ್‌ರ ಮೃತ ಶರೀರದ ಬಳಿ ನಿಂತುಕೊಂಡು ಅವರನ್ನು ನೋಡತೊಡಗಿದರು. ಬಳಿಕ ಎಚ್ಚೆತ್ತುಕೊಂಡು ಹೇಳಿದರು. "ಇವರು ಏಳು ಜನರನ್ನು ಕೊಂದರು ಮತ್ತು ಮುಶ್ರಿಕರು ಇವರನ್ನು ಕೊಂದು ಹಾಕಿದರು". ಇವರು ನನ್ನಿಂದ ಮತ್ತು ನಾನು ಇವರಿಂದಲೂ ಆಗಿದ್ದೇನೆ".

ಪ್ರವಾದಿ (ಸ) ಜುಲಿಬೀಬ್‌ರ ಮೃತ ಶರೀರವನ್ನು ತನ್ನ ಕೈಗಳಿಂದ ಎತ್ತಿಕೊಂಡರು ಮತ್ತು ಸ್ವಹಾಬಿಗಳಿಗೆ ಗೋರಿ ತೋಡಲು ಹೇಳಿದರು.

ಅನಸ್ (ರ) ಹೇಳುವಂತೆ ನಾವು ಗೋರಿ ತೋಡುತ್ತಾ ಇದ್ದೆವು ಮತ್ತು ಜುಲಿಬೀಬ್ ಪ್ರವಾದಿ ವರ್ಯರ ಬಾಹುಗಳನ್ನು ಹಾಸಿಗೆಯನ್ನಾಗಿ ಮಾಡಿ ಮಲಗಿಕೊಂಡಿದ್ದರು.

ಗೋರಿ ಸಿದ್ಧಗೊಂಡಾಗ ಪ್ರವಾದಿ ವರ್ಯರು ತನ್ನ ಸ್ವಂತ ಕೈಗಳಿಂದ ಅವರನ್ನು ಗೋರಿಯೊಳಗೆ ಇಳಿಸಿದರು.

ಅನಸ್ (ರ) ಜುಲಿಬೀಬ್‌ರ ಪತ್ನಿಯ ಪಾವಿತ್ರ್ಯತೆ ಮತ್ತು ಸೌಂದರ್ಯದ ಕುರಿತಾಗಿ ಹೀಗೆ ಹೇಳುತ್ತಾರೆ : "ಅಲ್ಲಾಹನಾಣೆ! ಅನ್ಸಾರಿಗಳಲ್ಲಿ ಇಷ್ಟೊಂದು ವಿವಾಹ ಪ್ರಸ್ತಾಪ ಮಾಡಲ್ಪಟ್ಟ ವಿಧವೆ ಇನ್ನೊಬ್ಬರಿಲ್ಲ".❹

ಮೇಲಿನ ವಿಷಯಗಳ ಕುರಿತು ಸಂಕ್ಷಿಪ್ತವಾಗಿ ಹೇಳುವುದಾದರೆ ಪ್ರವಾದಿ (ಸ)ರು ಪ್ರತಿಯೊಬ್ಬರೊಂದಿಗೂ ಅವರ ಅರಿವು, ಪ್ರವರ್ತನೆ ಮತ್ತು ವಯಸ್ಸನ್ನು ಪರಿಗಣಿಸಿಕೊಂಡು ಮಾತುಕತೆ ನಡೆಸುತ್ತಿದ್ದರು. ಇಂತಹ ಶೈಲಿಯನ್ನು ಬಳಸುವವರಿಗೆ ಸಿಗುವ ಲಾಭವೇನೆಂದರೆ ಕೇಳುವವರು, ಹೇಳುವವರ ಮಾತಿನಿಂದ ಪ್ರಭಾವಿತರಾಗುತ್ತಾರೆ.

ಒಂದು ದಿನ ಪ್ರವಾದಿ (ಸ) ತನ್ನ ಪತ್ನಿ ಆಯಿಷಾ (ರ) ರವರ ಬಳಿ ಕುಳಿತಿದ್ದರು. ಇಲ್ಲಿ ಗಮನಿಸಲಿರುವ ವಿಷಯವೇನೆಂದರೆ, ಪತಿ–ಪತ್ನಿಯರು ಒಟ್ಟಿಗೆ ಕುಳಿತಾಗ ಯಾವ ವಿಷಯಗಳು ಅಲ್ಲಿ ಪ್ರಾಧಾನ್ಯತೆ ಪಡೆಯುತ್ತದೆ ಎನ್ನುವುದಾಗಿದೆ. ಆಯಿಷಾ (ರ) ರೊಂದಿಗೆ ನೆಬಿ (ಸ)ರವರು ರೋಮನ್ನರೊಂದಿಗೆ ಯುದ್ಧ ಮಾಡುವ ಕುರಿತು ಚರ್ಚಿಸಲಿಲ್ಲ. ಯುದ್ಧದಲ್ಲಿ ಎಂತಹ ತಂತ್ರ ಪ್ರಯೋಗಿಸಬೇಕೆಂಬ ಕುರಿತೂ ಪ್ರಸ್ತಾಪಿಸಲಿಲ್ಲ. ಏಕೆಂದರೆ, ಅಭಿಸಂಬೋಧಿತರು ಅಬೂಬಕ್ಕರ್ (ರ) ಆಗಿರಲಿಲ್ಲ. ಪ್ರವಾದಿ (ಸ)ರು ಆಯಿಷಾ (ರ) ಮುಂದೆ ಮುಸಲ್ಮಾನರ ಆರ್ಥಿಕ ದುರವಸ್ಥೆಯ ಬಗ್ಗೆ ಅಥವಾ ಅವರನ್ನು ಆವರಿಸಿಕೊಂಡಿರುವ ದಾರಿದ್ರ್ಯದ ಬಗ್ಗೆ ಪ್ರಸ್ತಾಪಿಸಲಿಲ್ಲ. ಏಕೆಂದರೆ ಅಭಿಸಂಭೋಧಿತರು ಉಸ್ಮಾನ್ (ರ) ಕೂಡಾ ಅಲ್ಲ. ಬದಲಾಗಿ ಅವರು ಸಹೃದಯಿ ಪತಿಯ ಪ್ರೀತಿ ತುಂಬಿದ ದಾಟಿಯಲ್ಲಿ "ನೀನು ಯಾವಾಗ ನನ್ನೊಂದಿಗೆ ಪ್ರಸನ್ನಳಾಗಿರುತ್ತೀ ಮತ್ತು ನೀನು ಯಾವಾಗ ನನ್ನೊಂದಿಗೆ ಬೇಸರದಲ್ಲಿರುತ್ತೀ ಎಂದು ನಾನು ಅಂದಾಜಿಸಬಲ್ಲೆ" ಎಂದು ಹೇಳಿದರು.

ಆಯಿಷಾ (ರ) ಕುತೂಹಲಭರಿತರಾಗಿ ಕೇಳಿದರು : ಅದು ಹೇಗೆ? ಆಗ ಪ್ರವಾದಿ (ಸ) ಹೇಳುತ್ತಾರೆ : "ನೀನು ನನ್ನೊಂದಿಗೆ ಪ್ರಸನ್ನಳಾಗಿದ್ದಾಗ "ಮುಹಮ್ಮದರ ಪ್ರಭುವಿನಾಣೆ" ಎಂದು ಹೇಳುತ್ತಿಯಾ ಮತ್ತು ನೀನು ನನ್ನೊಂದಿಗೆ ಮುನಿಸಿಕೊಂಡಾಗ "ಇಬ್ರಾಹೀಮರ ಪ್ರಭುವಿನಾಣೆ" ಎಂದು ಹೇಳುತ್ತಿ"

ಆಗ ಆಯಿಷಾ (ರ) ನಾಚಿಕೊಂಡು ಹೇಳಿದರು : "ಅಲ್ಲಾಹನ ಸಂದೇಶವಾಹಕರೇ! ಅಲ್ಲಾಹನಾಣೆ! ನಾನು ಕೇವಲ ನಿಮ್ಮ ಹೆಸರನ್ನಷ್ಟೇ ಬಿಟ್ಟು ಬಿಡುತ್ತೇನೆ".❺

ಇಲ್ಲಿ ಉದ್ಭವಿಸುವ ಪ್ರಶ್ನೆಯೇನೆಂದರೆ ಇಂದು ನಾವೂ ಮಾತಿನಲ್ಲಿ ಇಂತಹ ಶೈಲಿಯನ್ನು ಬಳಸುತ್ತಿದ್ದೇವೆಯೇ?

**ಸಾರಾಂಶ :**

**"ಜನರೊಂದಿಗೆ ಅವರ ಅಭಿರುಚಿಗೆ ಅನುಸಾರವಾಗಿ ಮಾತಾಡಬೇಕೇ ಹೊರತು ನಮ್ಮ ಅಭಿರುಚಿಗೆ ಅನುಸಾರವಾಗಿ ಅಲ್ಲ"**

1. ಸಹೀಹುಲ್ ಬುಖಾರಿ 2097, ಸಹೀಹುಲ್ ಮುಸ್ಲಿಮ್ 715
2. ಮುಸ್ನದ್ ಅಹ್ಮದ್ 3/376
3. ಸಹೀಹುಲ್ ಮುಸ್ಲಿಮ್ 715
4. ಮುಸ್ನದ್ ಅಹ್ಮದ್ 4/422
5. ಸಹೀಹುಲ್ ಬುಖಾರಿ 5228, ಸಹೀಹುಲ್ ಮುಸ್ಲಿಮ್ 2439

# ಮೊದಲ ತೀರ್ಮಾಣವೇ ಅಂತಿಮ ತೀರ್ಮಾಣ

ಮಿಸ್ರ್‌ನ ಕೆಲವು ಹಳ್ಳಿಗಳಲ್ಲಿ ಹಳೆಯ ಕಾಲದಿಂದಲೇ ಕಂಡು ಬರುತ್ತಿರುವ ಒಂದು ಸಂಪ್ರದಾಯವಿದೆ. ಅದರಂತೆ ಮದುಮಗನು ಪ್ರಥಮ ರಾತ್ರಿಗಿಂತ ಮೊದಲು ತನ್ನ ಕೋಣೆಯಲ್ಲಿ ಒಂದು ಬೆಕ್ಕನ್ನು ತಂದು ಅಡಗಿಸಿಡುತ್ತಾನೆ. ಬಳಿಕ ಮದುಮಗಳನ್ನು ಕೋಣೆಗೆ ಕರೆತಂದು ಕೂಡಿಸಲಾಗುತ್ತದೆ. ನಂತರ ವರನು ಕೋಣೆಗೆ ಪ್ರವೇಶಿಸುತ್ತಾನೆ ಮತ್ತು ಕುರ್ಚಿಯನ್ನು ಹಿಡಿದು ಅಲುಗಾಡಿಸುತ್ತಾನೆ. ತಕ್ಷಣ ಅದರ ಕೆಳಗೆ ಅಡಗಿಸಲಾಗಿದ್ದ ಬೆಕ್ಕು ಥಂಗನೆ ಹೊರಗೆ ಬರುತ್ತದೆ. ಮದುಮಗಳು ಗಾಭರಿಗೊಳ್ಳುತ್ತಾಳೆ. ಮದುಮಗನು ತನ್ನ ಪುರುಷತ್ವವನ್ನು ಮೆರೆದು ಅದನ್ನು ಹಿಡಿದು ತನ್ನ ಬಲಪ್ರಯೋಗಿಸಿ ಅದರ ಕೊರಳನ್ನು ಹಿಂಡಿ ಸಾಯಿಸಿ ಬಿಡುತ್ತಾನೆ. ಇದೆಲ್ಲವೂ ಏಕೆಂದರೆ ಪ್ರಥಮ ಸಮಾಗಮದಲ್ಲೇ ಪತಿಯ ಕುರಿತು ಹೆದರಿಕೆ ಮತ್ತು ಶ್ರದ್ಧೆ ಪತ್ನಿಯ ಮನದಲ್ಲಿ ಕೆತ್ತಲ್ಪಡಬೇಕು ಎಂದಾಗಿದೆ.

ನಾನು ಈ ಅಧ್ಯಾಯವನ್ನು ಬರೆಯುತ್ತಿದ್ದಾಗ ನನಗೆ ನೆನಪಿಗೆ ಬಂತು. ಆಗ ನಾನು ಯುನಿವರ್ಸಿಟಿಯಲ್ಲಿ ಅಧ್ಯಯನ ಮುಗಿಸಿ ನನ್ನ ಊರಿನ ಒಂದು ಕಾಲೇಜಿನಲ್ಲಿ ಅಸಿಸ್ಟೆಂಟ್ ಪ್ರೊಫೆಸರ್ ಆಗಿ ಕೆಲಸಕ್ಕೆ ಸೇರಿದ್ದೆ. ಕಾಲೇಜಿನ ಒಂದು ಅನುಭವಿ ಪ್ರೊಫೆಸರ್ ನನ್ನ ಬಳಿ ಬಂದು ಹೇಳಿದರು, "ನಿಮ್ಮ ಮೊದಲ ಕ್ಲಾಸಿನಲ್ಲೇ ವಿದ್ಯಾರ್ಥಿಗಳ ಮೇಲೆ ಒತ್ತಡ ಹಾಕಿರಿ. ಗಂಭೀರವಾಗಿ ಕೋಪದಿಂದ ಸಿಡಿಯುವಂತೆ ವರ್ತಿಸಿರಿ. ಪ್ರಥಮ ದಿನವೇ ವಿದ್ಯಾರ್ಥಿಗಳ ಮೇಲೆ ನೀವು ಹಿಡಿತ ಸಾಧಿಸಬೇಕು. ಅವರು ಎಂದೂ ನಿಮಗೆ ಬಾಗಿಕೊಂಡಿರಬೇಕು."

ನೆನಪಿಡಿ! ನೀವು ಒಬ್ಬರ ಮೇಲೆ ಒಟ್ಟಾಗಿ ಉಂಟು ಮಾಡಬಹುದಾದ ಪ್ರಭಾವದ ಶೇಕಡ 70ನ್ನು ಪ್ರಥಮ ಭೇಟಿಯಲ್ಲೇ ಉಂಟು ಮಾಡಬಹುದು. ಪ್ರಥಮ ಭೇಟಿ (ನೋಟ)ಯಲ್ಲೇ ನೀವು ಸಂಭೋಧಿಸುವವರಲ್ಲಿ ನಿಮ್ಮ ಕುರಿತಾದ ಅಭಿಪ್ರಾಯವು ರೂಪೀಕರಣಗೊಳ್ಳುತ್ತದೆ.

ಸರಕಾರಿ ಆಫೀಸರ ಒಂದು ಗುಂಪು ತರಬೇತಿ ವರ್ಕ್‌ಶಾಪ್‌ನಲ್ಲಿ ಭಾಗವಹಿಸಲು ಅಮೇರಿಕಕ್ಕೆ ಪ್ರಯಾಣಿಸಿತು. ವರ್ಕ್‌ಶಾಪ್‌ನ ವಿಷಯ "ಸ್ನೇಹ ಚಿಗುರಿಸುವ ವರ್ತನೆಗಳು" ಎಂದಾಗಿತ್ತು.

ಮೊದಲ ದಿನ ಎಲ್ಲಾ ವಿದ್ಯಾರ್ಥಿಗಳೂ ಬೆಳಿಗ್ಗೆಯೇ ಸಿದ್ಧರಾಗಿ ಸಭಾಂಗಣದಲ್ಲಿ ಬಂದು ಸೇರಿದರು. ಒಬ್ಬರು ಮತ್ತೊಬ್ಬರಿಗೆ ತಮ್ಮ ಪರಿಚಯ ಮಾಡತೊಡಗಿದರು. ಇದ್ದಕ್ಕಿದ್ದಂತೆಯೇ ಪ್ರೊಫೆಸರ್ ಸಾಹೇಬರು ಅಲ್ಲಿ ಪ್ರತ್ಯಕ್ಷರಾದರು. ಸಭಾಂಗಣವು ಮೌನವಾಯಿತು. ಪ್ರೊಫೆಸರರ ದೃಷ್ಟಿಯು ಒಂದು ವಿದ್ಯಾರ್ಥಿಯ ಕಡೆಗೆ ಹರಿಯಿತು.

ಅವನಿನ್ನೂ ಮುಗುಳ್ನಗುತ್ತಲೇ ಇದ್ದ. ಅವರು ಬಹಳ ಕೋಪದಿಂದ ಜೋರಾಗಿ ಕೇಳಿದರು,

"ನೀನು ನಗುವುದೇಕೆ?"

"ಕ್ಷಮಿಸಿ ಸರ್! ನಾನು ನಗಲಿಲ್ಲ" ವಿದ್ಯಾರ್ಥಿಯು ಸಮಾಧಾನದಿಂದಲೇ ಉತ್ತರಿಸಿದ.

"ಇಲ್ಲ ನೀನು ನಗಾಡುತ್ತಿದ್ದೆ" ಪ್ರೊಫೆಸರ್ ಮತ್ತೆ ಅದನ್ನೇ ಹೇಳಿದರು. ಬಳಿಕ ಅವರು ವಿದ್ಯಾರ್ಥಿಯನ್ನು ಗದರಿಸತೊಡಗಿದರು.

"ನೀನು ಒಬ್ಬ ಹೊಣೆಗೇಡಿ ಮನುಷ್ಯ. ಪ್ರಥಮ ಫ್ಲೈಟ್‌ನಲ್ಲೇ ನೀನು ಮನೆಗೆ ಮರಳುವುದು ಒಳ್ಳೆಯದು. ನಾನು ನಿನ್ನಂತವರಿಗೆ ಕಲಿಸಲಾರೆ" ವಿದ್ಯಾರ್ಥಿಯು ಪಾಪ ಸಂಪೂರ್ಣ ಇಳಿದು ಹೋದನು. ಅವನು ಒಮ್ಮೆ ಪ್ರೊಫೆಸರನ್ನೂ, ಇನ್ನೊಮ್ಮೆ ಸಹಾಯ ಮಾಡಿರೆಂಬ ಇರಾದೆಯಿಂದ ವಿದ್ಯಾರ್ಥಿಗಳನ್ನೂ ನೋಡತೊಡಗಿದನು.

ಕೊನೆಗೆ ಪ್ರೊಫೆಸರ್ ಕೋಪದಿಂದ ಉಸಿರು ಬಿಗಿ ಹಿಡಿದು ಬಾಗಿಲಿನ ಕಡೆಗೆ ಬೆರಳು ತೋರಿಸುತ್ತಾ ಹೇಳಿದರು.

"ಕ್ಲಾಸಿನಿಂದ ಹೊರಗೆ ಹೋಗು"

ವಿದ್ಯಾರ್ಥಿಯು ನಿರ್ವಾಹವಿಲ್ಲದ ಬೇಸರದಿಂದ ಸಭಾಂಗಣದಿಂದ ಹೊರಟು ಹೋದನು. ಈಗ ಪ್ರೊಫೆಸರ್ ಸಾಹೇಬರು ವಿದ್ಯಾರ್ಥಿಗಳ ಕಡೆಗೆ ಗಮನ ಹರಿಸುತ್ತಾ ಹೇಳಿದರು. "ನಾನು ಡಾಕ್ಟರ್ ಇಂತಿಂಥವನಾಗಿದ್ದು ನಿಮಗೆ ಇಂತಿಂಥಹಾ ವಿಷಯವನ್ನು ಕಲಿಸಲಿದ್ದೇನೆ. ಆದರೆ ಅದಕ್ಕಿಂತ ಮೊದಲು ನೀವು ಈ ಫಾರಂನ್ನು ಭರ್ತಿ ಮಾಡಿಕೊಡಬೇಕು. ಅದರಲ್ಲಿ ಯಾರೂ ನಿಮ್ಮ ಹೆಸರನ್ನು ಬರೆಯಬಾರದು."

ಇಷ್ಟು ಹೇಳಿ ಅವರು ಸಿದ್ಧಪಡಿಸಿ ತಂದಿದ್ದ ಫಾರಂನ್ನು ವಿದ್ಯಾರ್ಥಿಗಳಿಗೆ ಹಂಚಿದರು. ಫಾರಂನಲ್ಲಿ 5 ಪ್ರಶ್ನೆಗಳಿದ್ದವು.

1. ನಿಮ್ಮ ಗುರುಗಳ ವರ್ತನೆಯ ಕುರಿತು ನಿಮ್ಮ ಅಭಿಪ್ರಾಯವೇನು?
2. ಗುರುಗಳು ಪಾಠ ಮಾಡುವ ಕ್ರಮದ ಕುರಿತು ನೀವು ಏನು ಹೇಳುತ್ತೀರಿ?
3. ಗುರುಗಳು ವಿದ್ಯಾರ್ಥಿಗಳ ಅಭಿಪ್ರಾಯಕ್ಕೆ ಮನ್ನಣೆ ನೀಡುತ್ತಾರೆಯೇ?
4. ಇನ್ನೂ ಇದೇ ಗುರುಗಳು ನಿಮಗೆ ಕಲಿಸಲೆಂದು ನೀವು ಬಯಸುತ್ತೀರಾ?
5. ತರಗತಿಯ ಹೊರಗೆ ನೀವು ಗುರುಗಳೊಂದಿಗೆ ಸಂಪರ್ಕದಲ್ಲಿ ಸಂತುಷ್ಟರೇ?

ಪ್ರತೀ ಪ್ರಶ್ನೆಯ ಕೆಳಗೆ ನಾಲ್ಕು Options ಗಳನ್ನು ನೀಡಲಾಗಿತ್ತು.
1. ಸಾಮಾನ್ಯ 2. ಉತ್ತಮ 3. ತೃಪ್ತಿಕರ 4. ಅತೃಪ್ತಿಕರ

ಈ ಪೈಕಿ ಯಾವುದಾದರೂ ಒಂದನ್ನು ಆಯ್ದುಕೊಳ್ಳಬೇಕಾಗಿತ್ತು. ಎಲ್ಲಾ ವಿದ್ಯಾರ್ಥಿಗಳೂ ತಮ್ಮ ಫಾರಂನ್ನು ತುಂಬಿಸಿ ಪ್ರೊಫೆಸರ್ ಸಾಹೇಬರಿಗೆ ಮರಳಿಸಿದರು. ಪ್ರೊಫೆಸರ್ ಎಲ್ಲಾ ಫಾರಂಗಳನ್ನು ಸರಿಯಾಗಿ ಜೋಡಿಸಿ ಬದಿಯಲ್ಲಿ ತೆಗೆದಿಟ್ಟು ವರ್ಕ್‌ಶಾಪ್‌ನ

ವಿಷಯದ ಕುರಿತು ಉಪನ್ಯಾಸದಲ್ಲಿ ತೊಡಗಿದರು. ಬಳಿಕ ತಟ್ಟನೆ ಹೇಳಿದರು.

"ಹ್ಞಾಂ, ನಾನು ನಿಮ್ಮ ಸಹಪಾಠಿಯನ್ನು ನಿಮ್ಮಿಂದ ಏಕೆ ಬೇರ್ಪಡಿಸಬೇಕ?" ಎಂದು ಹೇಳಿ ತರಗತಿಯಿಂದ ಹೊರಬಂದರು. ತುಸು ಹಿಂದೆ ತರಗತಿಯಿಂದ ಹೊರಗೆ ಕಳುಹಿಸಲಾದ ಆ ವಿದ್ಯಾರ್ಥಿ ಹೊರಗೆ ಒಂದು ಬೆಂಚಿನಲ್ಲಿ ಕುಳಿತಿದ್ದರು. ಪ್ರೊಫೆಸರ್ ನೇರವಾಗಿ ಅವನ ಬಳಿಗೆ ಹೋದರು. ಮಂದಹಾಸ ಬೀರುತ್ತಾ ಕೈ ಕುಲುಕಿದರು. ಮತ್ತು ಮರಳಿ ತರಗತಿಗೆ ಕರೆ ತಂದರು. ವಿದ್ಯಾರ್ಥಿ ತನ್ನ ಸೀಟಿನಲ್ಲಿ ಕುಳಿತುಕೊಳ್ಳುತ್ತಿದ್ದಂತೆ ಪ್ರೊಫೆಸರ್ ಅವನ ಹೆಗಲಿನ ಮೇಲೆ ಕೈ ಇಡುತ್ತಾ ಹೇಳಿದರು.

"ಬಹುಷ ನಾನು ನಿಮ್ಮ ಮೇಲೆ ವಿನಾ ಕಾರಣ ಕೋಪಗೊಂಡೆ. ವಾಸ್ತವದಲ್ಲಿ ನಾನು ನನ್ನ ಒಂದು ಸ್ವಂತ ಸಮಸ್ಯೆಯ ಕಾರಣದಿಂದ ಬೇಸರದಲ್ಲಿದ್ದೆ. ನಾನು ಯಾರದೊ ಮೇಲಿನ ಸಿಟ್ಟು ಯಾರ ಮೇಲೆಯೋ ತೀರಿಸಿದಂತಾಯಿತು. ನಾನು ನಿಮ್ಮ ಕ್ಷಮೆ ಯಾಚಿಸುತ್ತೇನೆ. ನೀವು ಶಿಕ್ಷಣದ ವಿಷಯದಲ್ಲಿ ತುಂಬಾ ಆಸಕ್ತಿ ಹೊಂದಿದ್ದೀರಿ. ಆದ್ದರಿಂದಲೇ ನಿಮ್ಮ ಮನೆಮಂದಿಯನ್ನು ಬಿಟ್ಟು ಇಷ್ಟು ದೂರ ಬಂದು ನೆಲೆಸಿದ್ದೀರಿ. ನಾನು ನಿಮಗೆ ಮತ್ತು ಎಲ್ಲಾ ವಿದ್ಯಾರ್ಥಿಗಳಿಗೆ ಕೃತಜ್ಞತೆ ಸಲ್ಲಿಸುತ್ತೇನೆ. ನಿಮ್ಮಂತಹಾ ಜಿಜ್ಞಾಸೆ ಇರುವ ವಿದ್ಯಾರ್ಥಿಗಳಿಗೆ ಕಲಿಸುವುದು ನನ್ನ ಮಟ್ಟಿಗೆ ಅತ್ಯಂತ ಹೆಮ್ಮೆಯ ವಿಷಯವಾಗಿದೆ."

ಪ್ರೊಫೆಸರ್ ಸಾಹೇಬರು ವಿದ್ಯಾರ್ಥಿಗಳೊಂದಿಗೆ ಈ ರೀತಿಯ ಆತ್ಮೀಯ ಮಾತುಗಳನ್ನು ಆಡುತ್ತಾ ನಗಾಡುತ್ತಾ ಇದ್ದರು. ಬಳಿಕ ಅವರು ಕೆಲವು ಹೊಸ ಫಾರಂಗಳನ್ನು ಹೊರ ತೆಗೆದರು ಮತ್ತು ನಗುತ್ತಾ ಹೇಳಿದರು. "ನಿಮ್ಮ ಸಹಪಾಠಿ ಫಾರಂನ್ನು ತುಂಬಿಲ್ಲ. ಈಗ ನೀವು ಒಂದಾಗಿ ಈ ಫಾರಂನ್ನು ಎರಡನೇ ಭಾರಿ ತುಂಬಿಸಿಕೊಡಿ. ನೋಡೋಣ ಹೇಗಿರುತ್ತೆ?"

ಹೀಗೆ ಹೇಳುತ್ತಾ ಅವರು ಫಾರಂಗಳನ್ನು ವಿದ್ಯಾರ್ಥಿಗಳಿಗೆ ಹಂಚಿದರು. ವಿದ್ಯಾರ್ಥಿಗಳು ಫಾರಂನ್ನು ತುಂಬಿಸಿ ಪ್ರೊಫೆಸರ್‌ಗೆ ಮರಳಿಸಿದರು. ಈಗ ಪ್ರೊಫೆಸರ್ ವಿದ್ಯಾರ್ಥಿಗಳು ಮೊದಲು ಭರ್ತಿ ಮಾಡಿದ ಫಾರಂಗಳನ್ನು ಬದಿಯಿಂದ ಹೊರತೆಗೆದು ಈಗ ವಿದ್ಯಾರ್ಥಿಗಳು ತುಂಬಿಸಿ ಕೊಟ್ಟ ಫಾರಂನೊಂದಿಗೆ ಅದನ್ನು ತುಲನೆ ಮಾಡತೊಡಗಿದರು. ಮೊದಲ ಫಾರಂನಲ್ಲಿ "ಅತೃಪ್ತಿಕರ"ವೆನ್ನುವ ಉತ್ತರವೇ ತುಂಬಿಕೊಂಡಿತ್ತು. ಆದರೆ ಎರಡನೇ ಫಾರಂನಲ್ಲಿ ಎಲ್ಲರೂ "ಉತ್ತಮ" ಅಥವಾ "ತೃಪ್ತಿಕರ" ಎನ್ನುವುದನ್ನೇ ಆಯ್ದುಕೊಂಡಿದ್ದರು.

ಪ್ರೊಫೆಸರ್ ನಗುತ್ತಾ ವಿದ್ಯಾರ್ಥಿಗಳನ್ನು ಉದ್ದೇಶಿಸಿಕೊಂಡು ಹೇಳಿದರು. "ನೀವು ತರಗತಿಯಲ್ಲಿ ಕಂಡಿದ್ದೆಲ್ಲಾ ನಿಮಗೊಂದು ಪಾಠವಾಗಿದೆ. ಕೆಟ್ಟ ವರ್ತನೆ ಮತ್ತು ಕೆಟ್ಟ ಸ್ವಭಾವದ ಪರಿಣಾಮ ಬಹಳ ಬೇಗ ತರಗತಿಯ ವಾತಾವರಣದಲ್ಲಿ ಹರಡಿಕೊಂಡು ಬಿಡುತ್ತದೆ. ನಿಮ್ಮ ಸಹಪಾಠಿಯೊಂದಿಗೆ ನನ್ನ ವರ್ತನೆಯ ರೀತಿ ಈ ಮಾತಿಗೆ ಒಂದು ಉತ್ತಮ ಉದಾಹರಣೆಯಾಗಿದೆ. ಬಳಿಕ ನನ್ನ ವರ್ತನೆಯಲ್ಲಿ ನಾನು ನಡೆಸಿದ

ಬದಲಾವಣೆಯಿಂದ ಕ್ಷಣಮಾತ್ರದಲ್ಲಿ ನನ್ನ ಕುರಿತಾದ ನಿಮ್ಮ ಅಭಿಪ್ರಾಯವು ಬದಲಾಗಿ ಬಿಟ್ಟಿತು."

ಇದು ಮನುಷ್ಯ ಸಹಜವಾದ ಸ್ವಭಾವವಾಗಿದೆ. ಆದ್ದರಿಂದ ಈ ಕುರಿತು ಗಮನಹರಿಸಬೇಕಾದುದು ಅತ್ಯಗತ್ಯವಾಗಿದೆ. ಮುಖ್ಯವಾಗಿ ನೀವು ಯಾರನ್ನು ಪ್ರಥಮ ಭಾರಿ ಬೇಟಿಯಾಗುತ್ತಿದ್ದೀರೋ ಅವರ ಮಟ್ಟಿಗೆ ನಿಮ್ಮ ನಡೆ, ನುಡಿ, ಸ್ವಭಾವ ಮತ್ತು ವರ್ತನೆ ಶೃದ್ಧೇಯವಾಗಿರುತ್ತದೆ, ಲೋಕ ಕಲ್ಯಾಣದ ಶಿಕ್ಷಣ ನೀಡಿದ ಮಹಾಗುರು ಮುಹಮ್ಮದ್(ಸ)ರವರು ಕೂಡಾ ಪ್ರಥಮ ಭೇಟಿಯಲ್ಲೇ ಜನರ ಹೃದಯವನ್ನು ಗೆದ್ದುಕೊಳ್ಳುತ್ತಿದ್ದರು.

ಮಕ್ಕಾ ವಿಜಯದ ನಂತರ ಇಸ್ಲಾಮ್ ಪ್ರಬಲ ಶಕ್ತಿ ಎಣಿಸಿತು ಅರಬ್ ಲೋಕದ ಮೂಲೆ ಮೂಲೆಗಳಿಂದ ಜನರು ಗುಂಪು ಗುಂಪಾಗಿ ಪ್ರವಾದಿ(ಸ)ರನ್ನು ಭೇಟಿಯಾಗಲು ಮದೀನಾದ ಕಡೆ ಬರಲಾರಂಭಿಸಿದರು. ಈ ಗುಂಪುಗಳಲ್ಲಿ ಅಬ್ದುಲ್ ಖೈಸ್‌ರವರ ಒಂದು ಗುಂಪೂ ಒಳಗೊಂಡಿತ್ತು. ಪ್ರವಾದಿ(ಸ)ರವರು ಈ ತಂಡವು ಆಗಮಿಸುತ್ತಿರುವುದನ್ನು ಕಂಡರು. ಅವರಿನ್ನೂ ತಮ್ಮ ಸವಾರಿಯಿಂದ ಕೆಳಗೆ ಇಳಿಯುವುದಕ್ಕಿಂತ ಮೊದಲೇ ಪ್ರವಾದಿ(ಸ)ರವರು ಅವರ ಕಡೆಗೆ ಧಾವಿಸುತ್ತಾ ಹೇಳಿದರು,

"ತಂಡಕ್ಕೆ ಸ್ವಾಗತ, ನಿಮಗಿಲ್ಲಿ ಯಾವುದೇ ರೀತಿಯ ಅಳುಕು ಅವಮಾನವಿರುವುದಿಲ್ಲ."

ಅವರು ಪ್ರವಾದಿ(ಸ)ರಿಂದ ಈ ಒಂದು ಹಿತಾಕಾಂಕ್ಷೆಯ ಪದಗಳನ್ನು ಕೇಳುತ್ತಲೇ ಸಂತೋಷಗೊಂಡರು. ತಕ್ಷಣ ಸವಾರಿಗಳಿಂದ ಕೆಳಗೆ ಜಿಗಿದು ಪ್ರವಾದಿ(ಸ)ರವರ ಬಳಿ ಓಡಿ ಬಂದರು. ಅವರಲ್ಲಿ ಪ್ರತಿಯೊಬ್ಬರೂ ಪ್ರವಾದಿ(ಸ)ರವರಿಗೆ ತಾನೇ ಮೊದಲಾಗಿ ಸಲಾಮ್ ಹೇಳಬೇಕೆಂದು ಬಯಸಿದ್ದರು.

ತಮ್ಮ ಮದೀನಾ ಪ್ರವಾಸದ ಮಧ್ಯೆ ಒಮ್ಮೆ ಅಬ್ದುಲ್ ಖೈಸ್‌ರವರ ತಂಡವು ಪ್ರವಾದಿ(ಸ)ರೊಂದಿಗೆ ಹೇಳಿತು. "ಅಲ್ಲಾಹನ ಸಂದೇಶ ವಾಹಕರೇ! ನಮ್ಮ ಮತ್ತು ನಿಮ್ಮ ನಡುವೆ ಮುಳಿರ್‌ಗೋತ್ರದ ಮುಶ್ರಿಕರಿಗೆ ಸೇರಿದವರು ವಾಸಿರುವ ಒಂದು ಊರು ನೆಲೆಗೊಂಡಿದೆ. ಆದ್ದರಿಂದ ನಾವು ನಿಮ್ಮನ್ನು ಕೇವಲ ಯುದ್ಧ ನಿಷೇದಿತ ಮಾಸಗಳಲ್ಲಷ್ಟೆ ಬಂದು ಕಾಣಬಹುದಾಗಿದೆ. ಆದ್ದರಿಂದ ನೀವು ನಮಗೆ ಇಸ್ಲಾಮಿನ ಕೆಲವು ಒಳ್ಳೆಯ ವಿಷಯಗಳನ್ನು ತಿಳಿಸಿಕೊಡಿರಿ. ಅದನ್ನು ನಿರ್ವಹಿಸಿಕೊಂಡು ನಾವು ಸ್ವರ್ಗಕ್ಕೆ ಹೋಗುವಂತಾಗಲಿ ಮತ್ತು ನಮ್ಮ ಸಮೂಹವನ್ನು ಅದರೆಡೆಗೆ ಆಮಂತ್ರಿಸುವಂತಾಗಲಿ."

ಪ್ರವಾದಿ(ಸ) ಉತ್ತರಿಸುತ್ತಾ ಹೇಳಿದರು:

"ನಾನು ನಿಮಗೆ ನಾಲ್ಕು ವಿಷಯಗಳ ಕುರಿತು ಆದೇಶ ನೀಡುತ್ತೇನೆ. ಮತ್ತು ನಾಲ್ಕು ವಿಷಯಗಳಿಂದ ನಿಮ್ಮನ್ನು ತಡೆಯುತ್ತೇನೆ. ಒಂದನೆಯದಾಗಿ ನಾನು ನಿಮಗೆ ಅಲ್ಲಾಹನ ಮೇಲೆ ವಿಶ್ವಾಸ ತಾಳುವಂತೆ ಆದೇಶಿಸುತ್ತೇನೆ. ಹಾಗೆಂದರೇನೆಂದು ನಿಮಗೆ ತಿಳಿದಿದೆ ತಾನೇ?" ಅವರು ಹೇಳಿದರು. ಅಲ್ಲಾಹ್ ಮತ್ತು ಅವನ ಸಂದೇಶ ವಾಹಕರೇ ಚೆನ್ನಾಗಿ

ಬಲ್ಲರು. ಪ್ರವಾದಿ(ಸ) ಹೇಳಿದರು,

“ಅಲ್ಲಾಹನಲ್ಲದೆ ಆರಾಧ್ಯರಿಲ್ಲವೆಂದು ಸಾಕ್ಷ್ಯವಹಿಸುವುದು, ನಮಾಝ್ ಸ್ಥಿರಪಡಿಸುವುದು, ಝಕಾತ್ ನೀಡುವುದು ಮತ್ತು ಸಮರಾರ್ಜಿತ್ ಸೊತ್ತಿನಿಂದ ಐದನೇ ಒಂದಂಶವನ್ನು ಕೊಡುವುದು. (ಅಜ್ಞಾನ ಕಾಲದಲ್ಲಿ ಶರಾಬ್ ತಯಾರಿಸಲು ಮತ್ತು ಸೇವಿಸಲು ಉಪಯೋಗಿಸುತ್ತಿದ್ದಂತಹಾ) ನಾಲ್ಕು ವಸ್ತುಗಳಿಂದ (ಪಾತ್ರೆ) ನಾನು ನಿಮ್ಮನ್ನು ತಡೆಯುತ್ತೇನೆ.”❶

ಇನ್ನೊಂದು ಸಂದರ್ಭದಲ್ಲಿ ರಾತ್ರಿ ಪ್ರವಾದಿ(ಸ) ತನ್ನ ಸಹವರ್ತಿಗಳೊಂದಿಗೆ ಪ್ರಯಾಣದಲ್ಲಿದ್ದರು. ಬಹಳ ಹೊತ್ತಿನ ತನಕ ನಡೆಯುತ್ತಲೇ ಇದ್ದರು. ರಾತ್ರಿಯ ಕೊನೆಯಲ್ಲಿ ಪ್ರಯಾಣ ನಿಲ್ಲಿಸಿ ಒಂದು ಸ್ಥಳದಲ್ಲಿ ವಿಶ್ರಮಿಸಲು ಡೇರೆ ಹಾಕಲಾಯಿತು. ಎಲ್ಲರೂ ಗಾಢ ನಿದ್ರೆಯಲ್ಲಿ ಬಿದ್ದರು. ಸೂರ್ಯ ಉದಯಿಸಿದ ನಂತರವೇ ಅವರಿಗೆ ಎಚ್ಚರಿಕೆಯಾಗಿದ್ದು. ಎಲ್ಲರಿಗಿಂತ ಮೊದಲು ಅಬೂಬಕರ್(ರ) ಎಚ್ಚರಗೊಂಡರು. ಬಳಿಕ ಉಮರ್(ರ) ಎಚ್ಚೆತ್ತುಕೊಂಡರು. ಅಬೂಬಕರ್(ರ) ಪ್ರವಾದಿ(ಸ)ರವರ ತಲೆಯ ಬಳಿ ಕುಳಿತುಕೊಂಡು ಜೋರಾಗಿ ತಕ್‌ಬೀರ್ ಹೇಳತೊಡಗಿದರು. ಅದರಿಂದ ಪ್ರವಾದಿ(ಸ) ಎಚ್ಚರಗೊಳ್ಳಲೆಂದು ಅವರು ಹಾಗೆ ಮಾಡುತ್ತಿದ್ದರು. ಸೂರ್ಯನು ತುಸು ಮೇಲೇರಿದ ನಂತರ ಪ್ರವಾದಿ(ಸ) ಫಜ್ರ್ ನಮಾಝ್ ಮಾಡಿಸಿದರು. ನಮಾಝ್ ಪೂರ್ಣಗೊಂಡಾಗ ಅವರು ಜನರ ಕಡೆಗೆ ತಿರುಗಿ ಕುಳಿತುಕೊಂಡರು. ಅವರಿಗೆ ಜನರಿಂದ ದೂರ ಸರಿದು ಕುಳಿತ ಒಬ್ಬ ವ್ಯಕ್ತಿ ಕಂಡು ಬಂದರು. ಅವನು ಜಮಾಅತಿನೊಂದಿಗೆ ನಮಾಝ್ ನಿರ್ವಹಿಸಿರಲಿಲ್ಲ. ಪ್ರವಾದಿ(ಸ) ಅವನೊಂದಿಗೆ.

“ಹೇ ಸಹೋದರಾ? ನೀವು ನಮ್ಮೊಂದಿಗೇಕೆ ನಮಾಝ್ ನಿರ್ವಹಿಸಲಿಲ್ಲ?” ಎಂದು ಕೇಳಿದರು. ಅವನು ಉತ್ತರವಾಗಿ

“ನಾನು ಜನಾಬತ್‌ನ ಸ್ಥಿತಿಯಲ್ಲಿದ್ದೇನೆ. ನನಗೆ ನೀರು ಸಿಗಲಿಲ್ಲ” ಎಂದನು. ಪ್ರವಾದಿ(ಸ) ಅವನೊಂದಿಗೆ ನೆಲದಿಂದ ತಯಮ್ಮುಮ್ ಮಾಡುವಂತೆ ಆಜ್ಞಾಪಿಸಿದರು. ಅವನು ತಯಮ್ಮುಮ್ ಮಾಡಿಕೊಂಡು ನಮಾಝ್ ನಿರ್ವಹಿಸಿದನು.

ತದ ನಂತರ ಪ್ರವಾದಿ(ಸ) ಸಹಾಬಿಗಳಿಗೆ ಪ್ರಯಾಣ ಮುಂದುವರಿಸಲು ಸೂಚಿಸಿದರು. ಅವರ ಬಳಿ ನೀರಿರಲಿಲ್ಲ, ಹಾದಿಯಲ್ಲಿ ಅವರಿಗೆ ಬಹಳ ಬಾಯಾರಿಕೆಯಾಯಿತು. ಎಷ್ಟು ಹುಡುಕಾಡಿದರೂ ಯಾವುದೇ ಬಾವಿ, ಚಿಲುಮೆ ಅಥವಾ ನೀರಿನ ಒರತೆ ಕಂಡುಬರಲಿಲ್ಲ.

ಇಮ್ರಾನ್ ಬಿನ್ ಹುಸೈನ್(ರ) ಈ ಘಟನೆಯನ್ನು ವಿವರಿಸುತ್ತಾ ಹೇಳುತ್ತಾರೆ, ನಾವು ದಾಹದಿಂದ ಬಳಲುತ್ತಾ ಪ್ರಯಾಣದಲ್ಲಿ ಮುಂದುವರಿಯುತ್ತಿದ್ದಂತೆ ಒಂದು ಪರ್ದಾದಾರಿಣಿ ಸ್ತ್ರೀಯನ್ನು ಕಂಡೆವು. ಅವಳೊಂದಿಗೆ ನೀರಿನ ಎರಡು ಚೀಲಗಳಿದ್ದವು ನಾವು ಅವಳೊಂದಿಗೆ “ನೀರು ಎಲ್ಲಿದೆ?” ಎಂದು ಕೇಳಿದೆವು.

"ಇಲ್ಲಿ ಅಕ್ಕ–ಪಕ್ಕದಲ್ಲಿ ಎಲ್ಲೂ ನೀರಿಲ್ಲ" ಅವಳು ಉತ್ತರಿಸಿದಳು.

"ನಿಮ್ಮ ಮನೆ ಮತ್ತು ನೀರಿರುವ ಸ್ಥಳದ ನಡುವೆ ಎಷ್ಟು ಅಂತರವಿದೆ?"

"ಒಂದು ದಿನ ಮತ್ತು ಒಂದು ರಾತ್ರಿ"

ನಾವು ಅವಳೊಂದಿಗೆ "ಅಲ್ಲಾಹನ ಸಂದೇಶ ವಾಹಕರ ಬಳಿಗೆ ಹೋಗೋಣ ನಡಿ" ಎಂದಾಗ ಅವಳು "ಅಲ್ಲಾಹನ ಸಂದೇಶ ವಾಹಕರೇ..? ಹಾಗೇಂದರೇನು...?" ಎಂದು ಕೇಳಿದಳು.

ನಾವು ಅವಳನ್ನು ನೀರಿನ ಸ್ಥಳ ತೋರಿಸುವಂತೆ ಹೇಳಿ ನಮ್ಮ ಜೊತೆಯಲ್ಲೇ ಕರೆದೊಯ್ದೆವು. ಪ್ರವಾದಿ(ಸ)ರವರ ಬಳಿಗೆ ಬಂದಾಗ ಅವರು ಕೂಡಾ ನೀರಿನ ಕುರಿತು ಅವಳೊಂದಿಗೆ ವಿಚಾರಿಸಿದರು. ಅವಳು ಪ್ರವಾದಿ(ಸ)ರವರಿಗೂ ನಮಗೆ ನೀಡಿದ ಉತ್ತರವನ್ನೇ ಕೊಟ್ಟಳು. ಹಾಗೆ ಅವಳು ಪ್ರವಾದಿ(ಸ)ರೊಂದಿಗೆ ಅವಳು ಅನಾಥ ಮಕ್ಕಳ ತಾಯಿಯಾಗಿದ್ದಾಳೆಂಬುದನ್ನು ತಿಳಿಸಿದಳು.

ಪ್ರವಾದಿ ವರ್ಯರು(ಸ) ಅವಳ ಒಂದು ನೀರಿನ ಚೀಲವನ್ನು ಕೆಳಗಿಳಿಸಿ ಅದರಲ್ಲಿ ತನ್ನ ಹಸ್ತವನ್ನು ಹಾಕಿ ಅಲುಗಾಡಿಸಿದರು. ಬಳಿಕ ಅವರು ಚೀಲದಿಂದ ನಮ್ಮ ಪಾತ್ರೆಗಳಿಗೆ ನೀರು ಸುರಿಯ ತೊಡಗಿದರು. ನಾವು ನಲ್ವತ್ತು ಬಾಯಾರಿಕೆಯಿಂದ ಬಳಲುತ್ತಿದ್ದವರು ನೀರು ಕುಡಿದು ನಮ್ಮ ದಾಹವನ್ನು ಶಮನ ಮಾಡಿಕೊಂಡೆವು. ಮಾತ್ರವಲ್ಲದೆ ನಮ್ಮೊಂದಿಗಿದ್ದ ನೀರಿನ ಚೀಲಗಳನ್ನು ತುಂಬಿಕೊಂಡೆವು. ಬಳಿಕ ನಾವು ಆ ಮಹಿಳೆಯ ನೀರಿನ ಚೀಲಗಳನ್ನು ಅವಳ ಒಂಟೆ(ಸವಾರಿ)ಯ ಮೇಲೆ ಇಟ್ಟೆವು. ಆ ಚೀಲಗಳಲ್ಲಿ ಈಗ ಮೊದಲಿಗಿಂತಲೂ ಹೆಚ್ಚು ನೀರು ತುಂಬಿರುವಂತೆ ಕಾಣುತ್ತಿದ್ದವು. ಬಳಿಕ ಪ್ರವಾದಿ(ಸ) ಹೇಳಿದರು:

"ನಿಮ್ಮ ಬಳಿ (ತಿನ್ನುವ) ಏನೇನು ವಸ್ತುಗಳಿದೆಯೊ ಅದನ್ನು ತನ್ನಿರಿ" ಪ್ರವಾದಿ (ಸ) ರೊಟ್ಟಿ ಮತ್ತು ಖರ್ಜೂರದ ತುಂಡುಗಳನ್ನು ಒಂದು ಬಟ್ಟೆಯಲ್ಲಿ ಕಟ್ಟಿ ಮಹಿಳೆಯ ಕೈಗಿಡುತ್ತಾ ಹೇಳಿದರು, "ಇದು ನಿಮ್ಮ ಮನೆಯವರಿಗಾಗಿ ಕೊಂಡೊಯ್ಯಿರಿ. ನಾವು ನಿಮ್ಮ ನೀರಿನಲ್ಲಿ ಸ್ವಲ್ಪವೂ ಕಡಿಮೆ ಮಾಡಿಲ್ಲ. ಆದರೆ ಅಲ್ಲಾಹನು ನಮಗೆ ನೀರು ಕುಡಿಸಿದನು" ಮಹಿಳೆ ತುಂಬಾ ಸಂತೋಷಗೊಂಡು ತನ್ನ ಒಂಟೆಯಲ್ಲಿ ಕುಳಿತು ತನ್ನ ಮನೆಗೆ ಮರಳಿದಳು. ಮನೆ ತಲುಪಿ ಅಲ್ಲಿರುವವರಿಗೆ ಹೇಳಿದಳು, "ನಾನು ಬಹಳ ದೊಡ್ಡ ಜಾದೂಗಾರರನ್ನು ಕಂಡು ಬರುತ್ತಿದ್ದೇನೆ. ಅವರು ನೆಬಿಯಂತೆ. ಹಾಗೇಂತ ಅವರ ಅನುಯಾಯಿಗಳು ಹೇಳುತ್ತಿದ್ದರು."

ಆ ಜನರಿಗೆ ಅವಳ ಮಾತು ಕೇಳಿ ಆಶ್ಚರ್ಯವಾಯಿತು. ಇದು ನಡೆದ ಸ್ವಲ್ಪ ಸಮಯದಲ್ಲಿ ಆ ಮಹಿಳೆ ಮತ್ತು ಅವಳ ಸಮೂಹವು ಒಟ್ಟಾಗಿ ಇಸ್ಲಾಮಿನಲ್ಲಿ ಪ್ರವೇಶಿಸಿದರು.❷

ಒಂದು ದಿನ ಒಬ್ಬ ವ್ಯಕ್ತಿ ಪ್ರವಾದಿ(ಸ)ರವರ ಬಳಿಗೆ ಬಂದರು ಮತ್ತು ಏನಾದರೂ

ಕೊಡುವಂತೆ ವಿನಂತಿಸಿದರು. ಪ್ರವಾದಿ(ಸ)ರು ಅವರಿಗೆ ಎರಡು ಪರ್ವತದ ತಪ್ಪಲಲ್ಲಿ ಮೇಯುವಷ್ಟು ಕುರಿಗಳನ್ನು ದಾನ ಮಾಡಿದರು. ಅವರು ಮರಳಿ ತಮ್ಮ ಸಮೂಹದೆಡೆಗೆ ಹೋಗಿ ಹೇಳಿದರು,

"ನನ್ನ ಸಮೂಹದವರೇ! ಮುಸಲ್ಮಾನರಾಗಿರಿ, ಮಹಮ್ಮದ್(ಸ) ದಾರಿದ್ರ್ಯವನ್ನು ಭಯಪಡದೆ ಬಹಿರಂಗವಾಗಿಯೇ ದಾನ ನೀಡುತ್ತಾರೆ".❸

ಅನಸ್(ರ)ರವರು ಹೇಳುತ್ತಾರೆ:

"ಪ್ರವಾದಿ(ಸ)ರವರ ಬಳಿಗೆ ಲೌಕಿಕ ತಾತ್ಪರ್ಯಕ್ಕಾಗಿ (ಧನ, ಸಂಪತ್ತು) ಬಂದು ಅದನ್ನು ಗಳಿಸಿಕೊಳ್ಳುವ ಜನರಿಗೆ ಕೂಡಾ ಕೆಲವೇ ದಿನಗಳಲ್ಲಿ ಇಹಲೋಕ ಮತ್ತು ಇದರಲ್ಲಿರುವ ಸರ್ವ ವೈಭವಗಳಿಗಿಂತಲೂ "ಇಸ್ಲಾಮ್" ಅಚ್ಚು ಮೆಚ್ಚಿನ ವಸ್ತುವಾಗಿ ಬಿಡುತ್ತಿತ್ತು."

**ಸಲಹೆ:**

**"ಪ್ರಥಮ ಬೇಟಿಯಲ್ಲೇ ಒಬ್ಬನ ಕುರಿತು ಶೇಕಡ70%ರಷ್ಟು ಅಭಿಪ್ರಾಯವು ಸ್ಫುಟಗೊಳ್ಳುತ್ತದೆ. ಆದ್ದರಿಂದ ಯಾರನ್ನಾದರೂ (ಪ್ರಥಮ ಭಾರಿ) ಭೇಟಿಯಾಗುವಾಗ ಇದು ಅವನೊಂದಿಗೆ ನನ್ನ ಪ್ರಥಮ ಮತ್ತು ಅಂತಿಮ ಭೇಟಿ ಎಂಬ ಗ್ರಹಿಕೆಯೊಂದಿಗೆ ಭೇಟಿಯಾಗಿರಿ."**

❶ ಸಹೀಹ್ ಬುಖಾರಿ, ಹದೀಸ್ 4368

❷ ಸಹೀಹ್ ಬುಖಾರಿ, ಹದೀಸ್ 3571, ಸಹೀಹ್ ಮುಸ್ಲಿಮ್, ಹದೀಸ್ 682

❸ ಸಹೀಹ್ ಮುಸ್ಲಿಮ್ 2312

# ಭೂಮಿ ಮತ್ತು ಮನುಷ್ಯನ ಪ್ರಕೃತಿ ಒಂದೇ ಆಗಿದೆ

ಜನರ ವೈವಿಧ್ಯಮಯ ಸ್ವಭಾವ ಮತ್ತು ನಡವಳಿಕೆಯ ಕುರಿತು ಅಧ್ಯಯನ ನಡೆಸುವವರಿಗೆ ಅದು ಭೂಮಿಯ ಗುಣದೊಂದಿಗೆ ತಾಳೆ ಹೊಂದುವುವುದನ್ನು ಕಂಡುಕೊಳ್ಳಬಹುದಾಗಿದೆ. ಜನರಲ್ಲಿ ಕೆಲವರು ಮೃದು ಮತ್ತು ಕೋಮಲ ಸ್ವಭಾವದವರಾದರೆ ಇನ್ನು ಕೆಲವರು ಕಠಿಣ ಮತ್ತು ಕಠೋರ ನಿಲುವಿನವರಾಗಿರುತ್ತಾರೆ. ಕೆಲವು ಜನರು ಫಸಲು ಕೊಡುವ ವಿಶಾಲ ಗದ್ದೆಗಳಂತೆ ಶ್ರೀಮಂತ ಹೃದಯವಂತರೂ ಉದಾರಿಗಳೂ ಆಗಿರುತ್ತಾರೆ. ಇನ್ನು ಕೆಲವರು ಬಂಜರು ಭೂಮಿಯಂತೆ ಅಲ್ಲಿ ನೀರು ನಿಲ್ಲುವುದೂ ಇಲ್ಲ, ಫಸಲು ಚಿಗುರುವುದೂ ಇಲ್ಲ. ಜಿಪುಣರಾಗಿರುತ್ತಾರೆ.

ಮಣ್ಣಿಗೆ ಬೇರೆ ಬೇರೆ ಗುಣಗಳಿರುವಂತೆ ಮನುಷ್ಯರ ಪ್ರವರ್ತನೆಗಳೂ ವಿವಿಧ ರೀತಿಯಲ್ಲಿರುತ್ತದೆ. ಕಲ್ಲುಗಳಿರುವ ಏರು–ತಗ್ಗುಗಳಿರುವ ಭೂಮಿಯಲ್ಲಿ ಮನುಷ್ಯರು ನಿಧಾನವಾಗಿ ಎಚ್ಚರಿಕೆಯಿಂದ ಹೆಜ್ಜೆ ಇಡುತ್ತಾ ನಡೆಯುತ್ತಾರೆ. ಅದೇ ಮೃದು ಮತ್ತು ನುಣ್ಣನೆಯ ಭೂಮಿಯಲ್ಲಿ ನಿರಾಳವಾಗಿ ಓಡುತ್ತಾ ಸಾಗುತ್ತಾರೆ. ಜನರ ಅವಸ್ಥೆ ಕೂಡಾ ಇದುವೇ ಆಗಿದೆ. ಪ್ರವಾದಿ(ಸ) ಹೇಳುತ್ತಾರೆ,

«إِنَّ اللَّهَ تَعَالَى خَلَقَ آدَمَ مِنْ قَبْضَةٍ قَبَضَهَا مِنْ جَمِيعِ الْأَرْضِ فَجَاءَ بَنُو آدَمَ عَلَى قَدْرِ الْأَرْضِ،فَجَاءَ مِنْهُمُ الْأَحْمَرُ، وَالْأَبْيَضُ، وَالْأَسْوَدُ، وَبَيْنَ ذَلِكَ، وَالسَّهْلُ، وَالْحَزْنُ، وَالْخَبِيثُ، وَالطَّيِّبُ»

**“ಅಲ್ಲಾಹನು ಭೂಮಿಯಿಂದ ಒಂದು ಮುಷ್ಠಿ ಮಣ್ಣು ತೆಗೆದನು ಮತ್ತು ಅದರಿಂದ ಆದಮ್(ಅ)ರನ್ನು ಸೃಷ್ಟಿಸಿದನು. ಆದಮರ ಮಕ್ಕಳು ಭೂಮಿಯ ಪ್ರಕೃತಿಯನ್ನು ಹಂಚಿಕೊಂಡು ಸೃಷ್ಟಿಸಲ್ಪಟ್ಟರು. ಕೆಲವರು ಕೆಂಪಗಿದ್ದರೆ ಕೆಲವರು ಬೆಳ್ಳಗೆ ಇನ್ನು ಕೆಲವು ಕಪ್ಪು ಮತ್ತು ಕೆಲವರು ಇವು ಮಿಶ್ರಣಗೊಂಡ ಬಣ್ಣ ಹೊಂದಿರುತ್ತಾರೆ. ಕೆಲವರು ಮೃದು ಸ್ವಭಾವ ದವರಾದರೆ ಕೆಲವರು ಕಠಿಣ ಹೃದಯದವರು. ಕೆಲವರು ಕೆಟ್ಟವರಾದರೆ ಕೆಲವರು ಒಳ್ಳೆಯವರು”❶**

ಜನರೊಂದಿಗೆ ವ್ಯವಹರಿಸುವಾಗ ಮೇಲಿನ ವಾಸ್ತವಿಕತೆಯ ಕುರಿತು ಜ್ಞಾನವಿರುವುದು ಅವಶ್ಯವಾಗಿದೆ. ಜನರ ಪ್ರಕೃತಿಯು ಅವರು ನೀಡುವ ತೀರ್ಮಾಣ ಮತ್ತು ಇರಾದೆಗಳಲ್ಲಿ ಪ್ರತಿಫಲನಗೊಳ್ಳುತ್ತದೆನ್ನುವುದು ಸದಾ ನೆನಪಿಟ್ಟುಕೊಳ್ಳಬೇಕಾದ ವಿಷಯವಾಗಿದೆ. ಈ ಕುರಿತು ನಿಮಗಿನ್ನೂ ವಿಶ್ವಾಸ ಮೂಡಿಲ್ಲದಿದ್ದರೆ ಪ್ರಯೋಗ ಮಾಡಿ ನೋಡಿ.

ಜೀವನದಲ್ಲಿ ನಿಮಗೆ ಎಂದಾದರೂ ನಿಮ್ಮ ದಾಂಪತ್ಯದಲ್ಲಿ ಜಟಿಲ ಸಮಸ್ಯೆ

ಎದುರಾಯಿತೆಂದಿಟ್ಟುಕೊಳ್ಳಿ. ಆಗ ನೀವು ನಿಮ್ಮ ಸ್ನೇಹಿತರ ಪೈಕಿ ಕಠೋರ ನಿಲುವು ಹೊಂದಿರುವ ತೀಕ್ಷ್ಣವಾಗಿ ಪ್ರತಿಕ್ರಿಯಿಸುವ ವ್ಯಕ್ತಿಯೊಂದಿಗೆ ಚರ್ಚಿಸಿ ನೋಡಿರಿ. ಉದಾಹರಣೆಗೆ ನೀವು ಅವರೊಂದಿಗೆ "ನನ್ನ ಹೆಂಡ್ತಿ ಆಗಾಗ ಸುಮ್‌ಸುಮ್ನೆ ಸಮಸ್ಯೆಗಳನ್ನು ಸೃಷ್ಟಿಸುತ್ತಿರುತ್ತಾಳೆ. ನನ್ನ ಮಾತಿಗೆ ಸ್ವಲ್ಪ ಕೂಡಾ ಗೌರವ ಕೊಡವುದಿಲ್ಲ ಏನ್ಮಾಡ್ಲೀಂತ ತಿಳೀತಾ ಇಲ್ಲ" ಎಂದು ಸಲಹೆ ಕೇಳಿದರೆ, ಅವರ ಉತ್ತರವು ಖಂಡಿತವಾಗಿಯೂ ಹೀಗಿರುವುದು : "ಹೆಂಡ್ತಿಯರು ದಂಡ ಪ್ರಯೋಗಿಸುತ್ತಿದ್ದರೇನೇ ನೇರವಾಗಿರುತ್ತಾರೆ. ಗಂಡಾದರೆ ಸಾಲದು ಗಂಡಸ್ತನವಿರಬೇಕು ಅವಳ ಅಹಂಕಾರವನ್ನು ಮುರಿ. ಒಂದು ಹೊಡೆದರೆ ಜೀವನ ಪೂರ್ತಿ ನೆನಪಿಟ್ಟುಕೊಳ್ಳಬೇಕು ಹಾಗೆ ಮಾಡು."

ನೀವು ಆವೇಶದಿಂದ ಅವರ ಸಲಹೆಯನ್ನು ಕಾರ್ಯರೂಪಕ್ಕೆ ತಂದರೆ ಜೋಕೆ, ನಿಮ್ಮ ಕುಟುಂಬವು ಸರ್ವನಾಶವಾಗಿ ಬಿಟ್ಟೀತು.

ಇನ್ನು ನೀವು ಈ ಸಮಸ್ಯೆಯನ್ನು ನಿಮ್ಮ ಮಿತ್ರರ ಪೈಕಿ ಮೃದು ಸ್ವಭಾವದ ವಿವೇಕಪೂರ್ಣ ನಡವಳಿಕೆಯ ವ್ಯಕ್ತಿಯ ಮುಂದಿಟ್ಟು ನೋಡಿ, ನಾನು ವಿಶ್ವಾಸದಿಂದ ಹೇಳಬಲ್ಲೆ, ಅವರ ಉತ್ತರವು ಹೀಗೇ ಇರುವುದು.

"ನನ್ನ ಸಹೋದರಾ! ಸ್ವಲ್ಪ ಆಲೋಚಿಸಿ ನೋಡು, ನಿನ್ನ ಪತ್ನಿ ಕೇವಲ ನಿನ್ನ ಪತ್ನಿ ಮಾತ್ರವಲ್ಲ, ನಿನ್ನ ಮಕ್ಕಳ ತಾಯಿ ಕೂಡಾ... ಲೋಕದಲ್ಲಿ ಯಾವ ಸಂಬಂಧವೂ ಇಂದು ಮನಸ್ತಾಪ ಮತ್ತು ಭಿನ್ನಾಭಿಪ್ರಾಯಗಳಿಂದ ಮುಕ್ತವಾಗಿಲ್ಲ. ಎಲ್ಲರೂ ಒಂದಲ್ಲ ಒಂದು ರೀತಿಯಿಂದ ಒತ್ತಡವನ್ನೂ ಸಮಸ್ಯೆಗಳನ್ನೂ ಎದುರಿಸುತ್ತಿರುವವರೇ ಆಗಿದ್ದಾರೆ. ಆದ್ದರಿಂದ ನೀನು ಸಹನೆ ಕೈಗೊಳ್ಳಬೇಕು. ಅವಳೇನೇ ಆಗಿದ್ದರೂ ನಿನ್ನ ಪತ್ನಿ ಮತ್ತು ಬಾಳ ಸಂಗಾತಿಯಾಗಿದ್ದಾಳೆ. ನನ್ನ ಸಲಹೆ ಇಷ್ಟೆ, ಇನ್ನು ನೀನು ಏನು ಬೇಕಾದರೂ ಮಾಡಿಕೊ"

ಮನುಷ್ಯನ ಪ್ರಕೃತಿಯು ಅವನ ಆಲೋಚನೆ – ಅಭಿಪ್ರಾಯ ಮತ್ತು ತೀರ್ಮಾಣಗಳ ಮೇಲೆ ಎಷ್ಟೊಂದು ಪರಿಣಾಮ ಬೀರುತ್ತದೆಂದು ಸ್ವಲ್ಪ ಆಲೋಚಿಸಿ ನೋಡಿ. ಇದೇ ಕಾರಣಕ್ಕಾಗಿ ಅಲ್ಲಾಹನ ಸಂದೇಶವಾಹಕರು(ಸ) ಕಾಝಿಗಳಿಗೆ ಅವರು ಕೋಪಗೊಂಡಿರುವ ಸ್ಥಿತಿಯಲ್ಲಿ ತೀರ್ಮಾಣ ಹೇಳಬಾರದೆಂದು ವಿಧಿಸಿರುವುದು. ಕೋಪವು ಅವನ ಮನೋಸ್ಥೈರ್ಯವನ್ನು ಕೆಡಿಸಿ ಅವರು ನೀಡುವ ತೀರ್ಮಾಣದ ದಿಕ್ಕನ್ನು ತಪ್ಪಿಸಬಹುದಾಗಿದೆ.

ಹಿಂದಿನ ಕಾಲದಲ್ಲಿ ಒಬ್ಬ ಹಂತಕನಿದ್ದನು. ಅವನು ಒಂದೆರಡಲ್ಲ, ಹತ್ತಿಪ್ಪತ್ತಲ್ಲ, ಒಟ್ಟು ತೊಂಬತ್ತೊಂಬತ್ತು ಜನರನ್ನು ಹತ್ಯೆಗೈದಿದ್ದ. ಅವನು ಜನರ ಪ್ರತೀಕಾರದಿಂದ ಹೇಗೆ ಪಾರಾದನೆಂದು ಗೊತ್ತಿಲ್ಲ. ಬಹುಷ ಜನರು ಅವನೆಂದರೆ ಎಷ್ಟು ಭಯಭೀತರಾಗುತ್ತಿದ್ದರೆಂದರೆ ಅವರು ಅವನ ಬಳಿಗೆ ಬರುವಷ್ಟೂ ಧೈರ್ಯ ತೋರುತ್ತಿರಲಿಲ್ಲವೇನೊ, ಅಥವಾ ಅವನು ಜನರಿಂದ ಬೇರ್ಪಟ್ಟು ಭೂಗತವಾಗಿ ಜೀವಿಸುತ್ತಿದ್ದನೇನೊ... ಏನಿದ್ದರೂ ಅವನು ತೊಂಬತ್ತೊಂಬತ್ತು ಮಾನವ ಜೀವಗಳನ್ನು

ಹರಣಗೈದಿದ್ದನು.

ಅವನಿಗೆ ತನ್ನ ಕೃತ್ಯಗಳು ಪಾಪವೆಂದು ಮನವರಿಕೆಯಾಯಿತು. ಅವನು ಪ್ರಾಯಶ್ಚಿತ ಮಾಡಿಕೊಳ್ಳಬೇಕೆಂದು ತೀರ್ಮಾಣಿಸಿಕೊಂಡ. ಅಕ್ಕಪಕ್ಕದವರಲ್ಲಿ ಅವನು ಭೂಮಿಯಲ್ಲಿ ಇಂದು ಜೀವಿಸಿರುವ ಅತ್ಯಂತ ದೊಡ್ಡ ವಿಧ್ವಾಂಸರು ಯಾರೆಂದು ವಿಚಾರಿಸಿದ. ಜನರು ಅವನಿಗೆ ಓರ್ವ ಮಹಾ ದೇವೋಪಾಸಕನ ಕುರಿತು ಹೇಳಿದರು. ಅವರು ಹಗಲು–ಇರುಳು ಆರಾಧನೆಯಲ್ಲಿ ನಿರತರಾಗಿರುತ್ತಾರೆಂದು ತಿಳಿಸಿದರು. ಅವನು ನೇರವಾಗಿ ಆ ವಿಧ್ವಾಂಸನ ಕುಟೀರಕ್ಕೆ ಪ್ರವೇಶಿಸಿದ. ಅವರನ್ನು ನೋಡುತ್ತಲೇ ಕೇಳಿದ “ನಾನು ತೊಂಬತ್ತೊಂಬತ್ತು ಜನರನ್ನು ಕೊಂದಿದ್ದೇನೆ ನನ್ನ ಪಾಪ ಪ್ರಾಯಶ್ಚಿತಕ್ಕೆ ಏನಾದರೂ ದಾರಿ ಇದೆಯೇ...?”

ಒಂದು ಇರುವೆಯ ಹತ್ಯೆಯನ್ನು ಕೂಡಾ ಮಹಾಪಾಪವೆಂದು ತಿಳಿಯುವ ವಿದ್ವಾಂಸನು ಈ ವ್ಯಕ್ತಿಯ ಪ್ರಶ್ನೆಯನ್ನು ಕೇಳಿ ಕಕ್ಕಾಬಿಕ್ಕಿಯಾದನು. ಅವನು ತಡವರಿಸುತ್ತಾ ಚೀರುತ್ತಾ ಹೇಳಿದನು,

“ಇಲ್ಲ, ನಿನ್ನ ಪಾಪಕ್ಕೆ ಯಾವ ಪ್ರಾಯಶ್ಚಿತವೂ ಇಲ್ಲ. ನಿನ್ನ ಕೃತ್ಯಕ್ಕೆ ಕ್ಷಮೆ ಇಲ್ಲ”

ವಿದ್ವಾಂಸನು ತೀರ್ಪು ನೀಡುವಾಗ ಭಾವನೆಯನ್ನು ಅವಲಂಬಿಸಿದನು ಜ್ಞಾನವನ್ನಲ್ಲ. ಪರಿಣಾಮ ತುಂಬಾ ಭೀಕರವಾಯಿತು. ಹಂತಕನು ಕಠೋರ ಹೃದಯದವನಾಗಿದ್ದನು. ವಿದ್ವಾಂಸನ ಮಾತು ಕೇಳಿ ಆಕ್ರೋಶಗೊಂಡನು. ಅವನು ಉರಿಯುವ ಕಣ್ಣುಗಳಿಂದ ವಿದ್ವಾಂಸನನ್ನು ನೋಡಿದನು. ಏಕಾಏಕಿ ತನ್ನ ಕತ್ತಿಯನ್ನು ಹೊರತೆಗೆದು ವಿದ್ವಾಂಸನ ದೇಹದಲ್ಲಿ ನೆಟ್ಟು ಬಿಟ್ಟನು ಮತ್ತು ಅಲ್ಲಿಂದ ಕಾಲ್ಕಿತ್ತನು.

ಕೆಲವು ದಿನಗಳು ಕಳೆದವು. ಹಂತಕನಿಗೆ ಮತ್ತೆ ತನ್ನ ಕೃತ್ಯದ ಬಗ್ಗೆ ಪಾಪ ಪ್ರಜ್ಞೆ ಮೂಡಿತು. ಅವನು ತನ್ನ ಪಾಪಕ್ಕೆ ಪ್ರಾಯಶ್ಚಿತ ಹುಡುಕುತ್ತಾ ಹೊರಟನು. ದೊಡ್ಡ ವಿದ್ವಾಂಸರನ್ನು ಅನ್ವೇಶಿಸಿದನು. ಜನರು ಅವನಿಗೆ ಒಂದು ದೊಡ್ಡ ವಿದ್ವಾಂಸನ ವಿಳಾಸ ಹೇಳಿದರು. ಅವನು ಕಾಲ್ನಡಿಗೆಯಲ್ಲೇ ವಿದ್ವಾಂಸರ ಕುಟೀರವನ್ನು ತಲುಪಿದನು. ವಿದ್ವಾಂಸರನ್ನು ಕಂಡ ತಕ್ಷಣ ಕೇಳಿದನು “ನಾನು ನೂರು ಜನರನ್ನು ಕೊಂದಿದ್ದೇನೆ. ನನ್ನ ಪಾಪದ ಪ್ರಾಯಶ್ಚಿತಕ್ಕೆ ಏನಾದರೂ ದಾರಿ ಇದೆಯೇ?”

ವಿದ್ವಾಂಸರು ತಕ್ಷಣ ಉತ್ತರಿಸಿದರು, “ಸುಬ್‌ಹಾನಲ್ಲಾಹ್! ನಿನ್ನ ಮತ್ತು ಪ್ರಾಯಶ್ಚಿತದ ಮಧ್ಯೆ ತಡೆಯಾಗುವವರು ಯಾರು?”

ಇದು ಒಂದು ಉನ್ನತವಾದ ಪ್ರತಿಕ್ರಿಯೆಯಾಗಿತ್ತು. ನಿಜವಾಗಿಯೂ ಅವನು ಮತ್ತು ಅವನ ಪ್ರಾಯಶ್ಚಿತಗಳ ಮಧ್ಯೆ ಯಾರೂ ಅಡೆತಡೆಯಾಗಬಾರದು. ಆಕಾಶ–ಭೂಮಿಗಳ ಸೃಷ್ಠಿಕರ್ತನ ಮುಂದೆ ಹೋಗಿ ನಿಂತು ತಪ್ಪೊಪ್ಪಿಕೊಂಡು ಪರಿತಪಿಸುತ್ತಾ ಕ್ಷಮೆಯಾಚಿಸುವುದರಿಂದ ಅವನನ್ನು ಯಾರು ತಡೆಯುತ್ತಾರೆ...?

ವಿದ್ವಾಂಸರು ಅರಗಿಸಿಕೊಂಡ ಶರೀಅತ್‌ನ ವಿಧ್ಯೆಯನ್ನು ಅನುಸರಿಸಿ ತೀರ್ಮಾಣ ಹೇಳುತ್ತಾರೆ ಬಾವೋದ್ವೇಗಕ್ಕೆ ಅಥವಾ ಪರಿಸ್ಥಿತಿಯ ಒತ್ತಡ ಮತ್ತು ಕಟ್ಟಳೆಗಳಿಗೆ ಶರಣಾಗಿ ಅಲ್ಲ. ವಿದ್ವಾಂಸರು ಮುಂದುವರಿಸುತ್ತಾ ಹೇಳಿದರು, "ನೀನು ಅನ್ಯಾಯ-ಅಕ್ರಮಗಳು ಮೇಲೈಸಿರುವ ಪ್ರದೇಶದಲ್ಲಿ ವಾಸಿಸುತ್ತಿದ್ದೀಯಾ. ಅಲ್ಲಿದ್ದರೆ ನಿನಗೆ ನಿನ್ನ ದುಷ್ಕೃತ್ಯಗಳನ್ನು ತೊರೆಯಲು ಕಷ್ಟವಾದೀತು. ಆದ್ದರಿಂದ ನೀನು ಅಲ್ಲಿಂದ ಇಂತಿಂತಹಾ ಊರಿಗೆ ಹೊರಟು ಹೋಗು. ಅಲ್ಲಿನ ಜನರು ಅಲ್ಲಾಹನನ್ನು ಆರಾಧಿಸುವವರಾಗಿದ್ದಾರೆ. ನೀನು ಕೂಡಾ ಅವರೊಂದಿಗೆ ಸೇರಿಕೊಂಡು ಅಲ್ಲಾಹನನ್ನು ಆರಾಧಿಸು."

ಅವನು ಅವರ ಮಾತನ್ನು ಅನುಸರಿಸಿ ತನ್ನ ಪಾಪಕ್ಕೆ ಪಶ್ಚಾತ್ತಾಪವನ್ನು ಹುಡುಕಿಕೊಂಡು ಹೊರಟು ಹೋದ. ಆದರೆ ಅವನು ಉದ್ದೇಶಿಸಿದ ಊರನ್ನು ತಲುಪುವ ಮೊದಲೇ ಅವನನ್ನು ಮೃತ್ಯು ವಶಪಡಿಸಿಕೊಂಡಿತು. ಅವನ ಆತ್ಮವನ್ನು ವಶಪಡಿಸಿಕೊಳ್ಳುವುದಕ್ಕೆ ಆಕಾಶದಿಂದ ಕರುಣೆಯ ಮತ್ತು ಯಾತನೆಯ ಮಲಕ್‌ಗಳು ಇಳಿದು ಬಂದರು. ಕರುಣೆಯ ದೇವಚರರು ಹೇಳಿದರು, "ಈ ವ್ಯಕ್ತಿ ತನ್ನ ಕೃತ್ಯಗಳ ಕುರಿತು ಪಶ್ಚಾತ್ತಾಪಟ್ಟು ಪ್ರಾಯಶ್ಚಿತಕ್ಕಾಗಿ ಬಂದಿದ್ದ" ಇದಕ್ಕೆ ಪ್ರತಿಕ್ರಿಯಿಸುತ್ತಾ ಯಾತನೆಯ ಮಲಕ್‌ಗಳು ಹೇಳಿದರು, "ಅವನೆಂದೂ ಒಳ್ಳೆಯ ಕಾರ್ಯ ಮಾಡಿದವನಲ್ಲ".

ಅಲ್ಲಾಹನು ಅವರ ಕಡೆಗೆ ಒಂದು ದೇವಚರರನ್ನು ಮನುಷ್ಯನ ರೂಪದಲ್ಲಿ ಕಳುಹಿಸಿದ. ಅವರು ದೇವಚರರ ಭಿನ್ನಾಭಿಪ್ರಾಯಕ್ಕೆ ಪರಿಹಾರವಾಗಿ ಹೀಗೆ ಹೇಳಿದರು : "ಎರಡೂ ಊರಿನ ನಡುವಿನ (ಬಂದ ಊರು ಮತ್ತು ತಲುಪಬೇಕಾದ ಊರು) ಅಂತರವನ್ನು ಅಳೆಯಿರಿ. ಅವನು ಯಾವ ಊರಿಗೆ ಸಮೀಪದಲ್ಲಿದ್ದಾನೊ ಅವನನ್ನು ಆ ಊರಿನವರಲ್ಲಿ ಪರಿಗಣಿಸುವುದು." ಅತ್ತ ಅಲ್ಲಾಹನು ಸಜ್ಜನರ ಊರಿಗೆ ಈ ವ್ಯಕ್ತಿಯ ಸಮೀಪಕ್ಕೆ ಬರುವಂತೆ ಆಜ್ಞಾಪಿಸಿದನು. ಅದೇ ಪ್ರಕಾರ ದುಷ್ಟರ ಊರಿಗೆ ಈ ವ್ಯಕ್ತಿಯಿಂದ ದೂರ ಸರಿಯುವಂತೆ ಆಜ್ಞಾಪಿಸಿದನು. ಆ ಪ್ರಕಾರ ಅವನು ಸಜ್ಜನರ ಊರಿಗೆ ಸಮೀಪವಿರುವುದನ್ನು ದೃಡೀಕರಿಸಿಕೊಂಡು ಕರುಣೆಯ ಮಲಾಇಕ್‌ಗಳು ಅವನ ಆತ್ಮವನ್ನು ಕೊಂಡೊಯ್ದರು."❷

ನೀವು ಪರಿಸ್ಥಿತಿ, ಕಟ್ಟು ಪಾಡು, ಮತ್ತು ಭಾವನೆಗಳನ್ನು ಅನುಸರಿಸಿಕೊಂಡು ತೀರ್ಮಾಣ ಹೇಳುವ ಮುಫ್ತಿಗಳನ್ನು ಕಂಡಿರಬಹುದಲ್ಲವೇ...?

ನನ್ನ ನೆರೆಮನೆಯವನು ಯಾವಾಗಲೂ ಅವನ ಹೆಂಡತಿಯೊಂದಿಗೆ ಜಗಳ ಮಾಡುತ್ತಿದ್ದ. ಒಂದು ದಿನ ಜಗಳ ಜೋರಾಯಿತು. ಅವನು ತನ್ನ ಹೆಂಡತಿಗೆ ತಲಾಖ್ ಹೇಳಿ ಬಿಟ್ಟ. ಕೋಪ ಇಳಿದ ನಂತರ ಹಿಮ್ಮೆಟ್ಟಿದ. ಮತ್ತೊಮ್ಮೆ ಜಗಳವಾಯಿತು. ಅವನು ಮತ್ತೊಂದು ತಲಾಖ್ ಹೇಳಿ ಬಿಟ್ಟ. ಕೋಪ ಇಳಿದ ನಂತರ ಮತ್ತೆ ಹಿಮ್ಮೆಟ್ಟಿದ. ನಾನು ಯಾವಾಗ ಅವನನ್ನು ಸಂಧಿಸಿದರೂ ಅವನಿಗೆ ಬುದ್ಧಿವಾದ ಹೇಳುತ್ತಿದ್ದೆ. ನಿನಗೆ ಸಣ್ಣ-ಸಣ್ಣ ಮಕ್ಕಳಿದ್ದಾರೆ. ಅವರ ಭವಿಷ್ಯ ಹಾಳಾಗುತ್ತದೆ. ನೀನು ಇನ್ನೊಮ್ಮೆ ಕೋಪಗೊಂಡು ಇನ್ನೊಂದು ತಲಾಖ್ ಹೇಳಿ ಬಿಟ್ಟರೆ ನಿನ್ನ ಪತ್ನಿ ನಿನ್ನ ಪಾಲಿಗೆ ನಿಷಿದ್ಧಳೆನಿಸಿ ಬಿಡುತ್ತಾಳೆ. ಅಲ್ಲಾಹನ ಭಯವಿರಿಸಿಕೋ ನಿನ್ನ ಕೈಯ್ಯಾರೆ ನಿನ್ನ ಮನೆಯನ್ನು ಸರ್ವನಾಶ ಮಾಡಬೇಡ.

ಆದರೆ ಅವನು ನನ್ನ ಯಾವ ಬುದ್ಧಿವಾದವನ್ನೂ ಸ್ವೀಕರಿಸಲಿಲ್ಲ. ಒಂದು ದಿನ ಅವನು ನನ್ನ ಮನೆಗೆ ಬಂದು ಹೇಳಿದ "ಶೈಖ್! ಇಂದು ಮತ್ತೆ ಜಗಳವಾಯಿತು. ನಾನು ನನ್ನ ಹೆಂಡ್ತಿಗೆ ಮೂರನೇ ತಲಾಕ್ ಹೇಳಿ ಬಿಟ್ಟೆ" ಅವನ ಮಾತು ನನಗೆ ವಿಚಿತ್ರವೆನಿಸಲಿಲ್ಲ. ಆದರೆ ತದನಂತರ ಅವನು ಹೇಳಿದ ಮಾತು ನನಗೆ ಅಚ್ಚರಿ ಉಂಡುಮಾಡಿತು. "ಈ ಸಲ ಕೂಡಾ ದಾಂಪತ್ಯ ಮುಂದುವರಿಸುವಂತೆ ಫತ್ವಾ ಕೊಡುವ ಮುಫ್ತಿ ಯಾರಾದರೂ ಇದ್ದಾರೆಯೇ.... ಎಷ್ಟು ಖರ್ಚಾದರೂ ಚಿಂತಿಲ್ಲ..."

ನಾನು ಈಗಾಗಲೇ ಹೇಳಿದಂತೆ ಜನರು ತಮ್ಮ ಜೀವನದ ವಿಷಯದಲ್ಲಿ ತೀರ್ಮಾಣ ತೆಗೆದುಕೊಳ್ಳುವಾಗ ಕೂಡಾ ಅವರು ವಿವೇಕಯುತವಾಗಿ ನಡೆದುಕೊಳ್ಳುವುದಿಲ್ಲ. ಭಾವನೆ ಅಥವಾ ಆವೇಶಕ್ಕೆ ಬಲಿ ಬೀಳುತ್ತಾರೆ. ನಂತರ ಇದರ ಪರಿಣಾಮವನ್ನು ಅನುಭವಿಸುತ್ತಾರೆ.

ಕೆಲವರು ಹಣ ಮತ್ತು ಅಂತಸ್ತನ್ನು ಸಂಪಾದಿಸಲು, ಅದನ್ನು ಭದ್ರವಾಗಿಡಲು ಪರಿಶ್ರಮಿಸುವವರನ್ನು ನೀವು ನೋಡಿರಬಹುದು. ಅಂತವರು ತಮ್ಮ ಪ್ರಯೋಜನಕ್ಕಾಗಿ ಕತ್ತೆಯ ಕಾಲಿಗೂ ಬೀಳಲು ಹೇಸುವುದಿಲ್ಲ. ತಮ್ಮ ಮಡದಿ ಮಕ್ಕಳ ಅವಶ್ಯಕತೆಗಳನ್ನೂ ಅವರು ಕಡೆಗಣಿಸುತ್ತಾರೆ. ಸದಾ ಹಣ ಕೂಡಿ ಹಾಕುವ, ದ್ವಿಗುಣಗೊಳಿಸುವ ಯೋಜನೆ ತಯಾರಿಸುತ್ತಿರುತ್ತಾರೆ. ಜಿಪುಣತನದಿಂದ ಜೀವನವನ್ನು ಸಾಗಿಸುತ್ತಾರೆ.

ಇಂತಹಾ ಜನರೊಂದಿಗೆ ನಿಮಗೇನಾದರೂ ವ್ಯವಹಾರ ನಡೆಸುವ ಪ್ರಸಂಗ ಬಂದರೆ ನೀವು ಮೊದಲು ಅವರು ಸಂಪತ್ತಿನ ಆರಾಧಕರೆನ್ನುವುದನ್ನು ನೆನಪಿಟ್ಟುಕೊಳ್ಳಬೇಕು ಮತ್ತು ಬಹಳ ಎಚ್ಚರಿಕೆಯಿಂದ ಕಾರ್ಯೋನ್ಮುಖರಾಗಬೇಕು.

ಪ್ರವಾದಿ(ಸ)ರು ಜನರೊಂದಿಗೆ ಅವರ ಪ್ರಕೃತಿಗನುಸಾರವಾಗಿ ವ್ಯವಹರಿಸುತ್ತಿದ್ದರು. ಅವರು(ಸ) ಇಸ್ಲಾಮೀ ಸೇನೆಯೊಂದಿಗೆ ಮಕ್ಕಾ ವಶಪಡಿಸಿಕೊಳ್ಳುವುದಕ್ಕಾಗಿ ರವಾನೆಯಾದರು. ಅಬೂಸುಫ್ಯಾನ್(ರ) ಇಸ್ಲಾಮಿ ಸೇನೆ ಮಕ್ಕಾ ಪ್ರವೇಶಿಸುವ ಮೊದಲೇ ಪ್ರವಾದಿ(ಸ)ರನ್ನು ಕಂಡು ಇಸ್ಲಾಮ್ ಸ್ವೀಕರಿಸಿದರು. ಇದು ಒಂದು ದೊಡ್ಡ ಕತೆಯಾಗಿದ್ದು ಸಂಕ್ಷಿಪ್ತವಾಗಿ ಹೇಳುವುದಾದರೆ ಅಬೂಸುಫ್ಯಾನ್ ಇಸ್ಲಾಮ್ ಸ್ವೀಕರಿಸಿದಾಗ ಅಬ್ಬಾಸ್(ರ) ಪ್ರವಾದಿ(ಸ)ರೊಂದಿಗೆ ಹೇಳಿದರು :

"ಅಲ್ಲಾಹನ ಸಂದೇಶವಾಹಕರೇ! ಅಬೂಸುಫ್ಯಾನ್ ಆತ್ಮ ಪ್ರಶಂಸೆಯ ಮನುಷ್ಯರಾಗಿದ್ದಾರೆ. ಅವರಿಗೆ ಪರಿಗಣನೆ ಇರಲಿ."

ಪ್ರವಾದಿ (ಸ) ಹೇಳಿದರು : "ಸರಿ, ಹಾಗೇ ಆಗಲಿ. ಯಾರಾದರೂ ಅಬೂಸುಫ್ಯಾನರ ಮನೆಯಲ್ಲಿ ಅಭಯ ಪಡೆದರೆ ಅವರಿಗೆ ರಕ್ಷೆ ಇದೆ. ಯಾರಾದರೂ ಅವರವರ ಮನೆಗಳಲ್ಲಿ ಬಾಗಿಲು ಹಾಕಿ ಕುಳಿತುಕೊಂಡರೆ ಅವರಿಗೆ ರಕ್ಷೆ ಇದೆ. ಇನ್ನು ಯಾರಾದರೂ ಮಸೀದಿಯನ್ನು ಪ್ರವೇಶಿಸಿದರೆ ಅವರಿಗೂ ರಕ್ಷೆ ಇದೆ."❸ಎಂದು ಘೋಷಿಸಿದರು.

ಅಲ್ಲಾಹನ ಸಂದೇಶವಾಹಕರು ಅಬುಸುಫ್ಯಾನ್(ರ)ರೊಂದಿಗೆ ಅವರ ಮನೊಭಾವಕ್ಕೆ ತಕ್ಕಂತೆ ವರ್ತಿಸಿದರು. ನೀವು ಜನರೊಂದಿಗೆ ವ್ಯವಹರಿಸುವಾಗ ಅವರ ಪ್ರಕೃತಿ

ಮನೋಭಾವವನ್ನು ಸರಿಯಾಗಿ ಅರ್ಥೈಸಿಕೊಂಡಿದ್ದರೆ ಅವರೊಂದಿಗೆ ನಿಮ್ಮ ವ್ಯವಹಾರವು ಸುಗಮವಾಗುತ್ತದೆನ್ನುವುದನ್ನು ಸದಾ ನೆನಪಿಟ್ಟುಕೊಳ್ಳಬೇಕು.

ಪ್ರವಾದಿ(ಸ)ರವರು ಮಹಾಜಿರ್–ಅನ್ಸಾರ್‌ಗಳನ್ನು ಒಳಗೊಂಡ ಸುಮಾರು 1400 ಜನರೊಂದಿಗೆ ಉಮ್ರ: ನಿರ್ವಹಣೆಗಾಗಿ ಹೊರಟರು. ಬಲಿಮೃಗಗಳೂ ಜೊತೆಗಿದ್ದವು. ಇಹ್ರಾಮ್ ಕೂಡಾ ಕಟ್ಟಿಕೊಂಡಿದ್ದರು. ಅವರು ಅಲ್ಲಾಹನ ಭವನದ ಸಂದರ್ಶನಕ್ಕೆ ಹೊರಟಿರುವರೆನ್ನುವುದು ಅವರನ್ನು ಕಂಡ ಯಾರಿಗೂ ತಿಳಿಯದಿರಲು ಸಾಧ್ಯವಿರಲಿಲ್ಲ. ಬಲಿಮೃಗಗಳಲ್ಲಿ ಪ್ರವಾದಿ(ಸ)ರವರ 70 ಒಂಟೆಗಳೂ ಇದ್ದವು. ಮುಸಲ್ಮಾನರು ಮಕ್ಕ ತಲುಪಿದಾಗ ಕುರೈಷರು ಅವರನ್ನು ನಗರಕ್ಕೆ ಪ್ರವೇಶಿಸದಂತೆ ತಡೆದರು. ಪ್ರವಾದಿ(ಸ) ತನ್ನ ಅನುಯಾಯಿಗಳೊಂದಿಗೆ ಮಕ್ಕ ನಗರಕ್ಕೆ ತುಸುದೂರದಲ್ಲಿರುವ ಹುದೈಬಿಯಾ ಎಂಬಲ್ಲಿ ಡೇರೆ ಹೂಡಿದರು.

ಕುರೈಷರು ಮಾತುಕತೆಗಾಗಿ ತಮ್ಮ ಜನರನ್ನು ಕಳುಹಿಸ ತೊಡಗಿದರು.

ಅವರ ಮೊದಲ ಪ್ರತಿನಿಧಿ ಮಕ್ರಝ್ ಬಿನ್ ಹಫ್ಸ್ ಆಗಿದ್ದರು. ಅವರು ಕುರೈಷರಲ್ಲಿ ಸೇರಿದವರಾಗಿದ್ದರೂ ವಚನವನ್ನು ಪಾಲಿಸುವ ಗುಣ ಇವರಿಗೆ ಇರಲಿಲ್ಲ. ಅವರು ದುಷ್ಟರೂ ವಚನ ಉಲ್ಲಂಘಿಸುವವರೂ ಆಗಿದ್ದರು. ಪ್ರವಾದಿ(ಸ) ಅವರು ಬರುತ್ತಿರುವುದನ್ನು ನೋಡಿ ಹೇಳಿದರು, "ಇವರು ಒಬ್ಬ ಮಾತಿಗೆ ತಪ್ಪುವ ವ್ಯಕ್ತಿಯಾಗಿದ್ದಾರೆ" ಪ್ರವಾದಿ(ಸ) ಮಕ್ರಝ್‌ರೊಂದಿಗೆ ಅವರ ಗುಣಮಟ್ಟವನ್ನು ಅನುಸರಿಸಿಕೊಂಡು ಮಾತಾಡಿದರು. ಅವನಿಗೆ ಯಾವುದೇ ಬರವಣಿಗೆ ಅವರು ನೀಡಲಿಲ್ಲ.! (ಏಕೆಂದರೆ, ಅವನು ಅದಕ್ಕೆ ತಕ್ಕ ವ್ಯಕ್ತಿಯಾಗಿರಲಿಲ್ಲ) "ನಾವು ಯುದ್ಧ ಮಾಡಲಿಕ್ಕಲ್ಲ ಉಮ್ರ ಮಾಡಲು ಬಂದಿದ್ದೇವೆ" ಎಂದಷ್ಟೇ ಹೇಳಿದರು. ಅವನು ಬಂದ ಹಾಗೆ ಮರಳಿ ಹೋದನು.

ಈಗ ಕುರೈಷರು ಆಹಾಬೀಶರ ನಾಯಕ ಹುಲೈಸ್‌ಬಿನ್ ಅಲ್ಕಮರನ್ನು ಮಾತುಕತೆಗಾಗಿ ಆರಿಸಿ ಕಳುಹಿಸಿದರು. ಅಹಾಬೀಶರು ಅರಬಿಗಳಲ್ಲಿ ಒಂದು ಸಮೂಹವಾಗಿದ್ದರು. ಕಅಬಾಲಯದ ಗೌರವಾರ್ಥ ಅವರು ಮಕ್ಕಾದಲ್ಲಿ ನೆಲೆಸಿದ್ದರು. ಕುರೈಷರು ಅವರ ಸುರಕ್ಷೆಯ ಹೊಣೆ ವಹಿಸಿದ್ದರು. ಪ್ರವಾದಿ (ಸ) ಹುಲೈಸ್ ಬಿನ್ ಅಲ್ಕಮರನ್ನು ನೋಡುತ್ತಲೇ ಹೇಳಿದರು, "ಈ ವ್ಯಕ್ತಿ ಇಂತಿಂಥಹಾ ಸಮುದಾಯಕ್ಕೆ ಸೇರಿದವರು. ಅವರು ಕಅಬಾಲಯವನ್ನೂ ಕುರ್ಬಾನಿಯ ಮೃಗಗಳನ್ನು ಅತ್ಯಾದರಪೂರ್ವಕ ಗೌರವಿಸುತ್ತಾರೆ. ಆದ್ದರಿಂದ ಬಲಿಮೃಗಗಳನ್ನು ಅವರ ಮುಂದೆ ತನ್ನಿರಿ ಅವರಿಗೆ ಅದು ಚೆನ್ನಾಗಿ ಕಾಣಿಸಲಿ"

ಹುಲೈಸ್ ಇಹ್ರಾಮ್ ಕಟ್ಟಿದ ಜನರನ್ನು, ಹರಮ್‌ನಲ್ಲಿ ಕುರ್ಬಾನಿಗಾಗಿ ಸಿದ್ಧಪಡಿಸಿರುವ ಮೃಗಗಳನ್ನು ನೋಡಿದರು. ಮೃಗಗಳು ಹಸಿವು ಮತ್ತು ದಾಹದಿಂದ ಕಂಗೆಟ್ಟಿರುವುದನ್ನು ಅವರು ಗುರುತಿಸಿದರು. ಅವರು ಈ ದೃಶ್ಯವನ್ನು ಕಂಡು ಕೆಂಡಾಮಂಡಲವಾದರು ಮತ್ತು ಪ್ರವಾದಿ(ಸ)ರವರನ್ನು ಭೇಟಿಯಾಗದೆ ಮರಳಿ ಕುರೈಶರ ಬಳಿಗೆ ಹೋದರು. ಅವರು ಹೇಳಿದರು "ಅಲ್ಲಾಹನ ಭವನವನ್ನು ಸಂದರ್ಶಿಸಲು ಬಂದ ಜನರನ್ನು ಅದ್ಹೇಗೆ ತಡೆಯಲಾದೀತು.?"

ಕುರೈಷರು ಅವರನ್ನು ದಬಾಯಿಸುತ್ತಾ ಹೇಳಿದರು "ಸಾಕು ನಿಲ್ಲಿಸು ನಿನ್ನ ಉಪದೇಶವನ್ನು. ನೀನು ಅರಬಿಯಲ್ಲ. ನಿನಗೇನು ಗೊತ್ತು?" ಇದರಿಂದ ಹುಲೈಸ್ ಕೆರಳಿದರು. ಅವರು ಹೇಳಿದರು, "ಕುರೈಷರೇ! ನಾವು ನಿಮ್ಮೊಂದಿಗೆ ಈ ಕಾರ್ಯದಲ್ಲಿ ಸಹಕರಿಸುವ ಒಪ್ಪಂದ ಮಾಡಿಕೊಂಡಿಲ್ಲ ಮತ್ತು ನಿಮ್ಮೊಂದಿಗೆ ಕೈ ಜೋಡಿಸುವ ಕರಾರನ್ನೂ ನೀಡಿಲ್ಲ. ಅಲ್ಲಾಹನ ಭವನದ ಕುರಿತು ಗೌರವವನ್ನು ಕಟ್ಟಿಕೊಂಡು ಅದನ್ನು ಸಂದರ್ಶಿಸಲು ಬಂದ ಜನರನ್ನು ಅದರಿಂದ ತಡೆಯುತ್ತೀರಾ...? ಯಾರ ಕೈಯಲ್ಲಿ ಹುಲೈಸರ ಪ್ರಾಣವಿದೆಯೋ ಅವನ ಮೇಲಾಣೆ! ನೀವು ಮುಹಮ್ಮದರ ದಾರಿಯನ್ನು ತಡೆಯಲಾರಿರಿ. ನೀವು ಹಾಗೇನಾದರೂ ಮಾಡಿದರೆ ನಾನು ಅಹಾಬೀಸರೊಂದಿಗೆ ನಿಮ್ಮ ಮೇಲೆ ಯುದ್ಧ ಹೂಡುತ್ತೇನೆ."

ಕುರೈಷರು ಹೇಳಿದರು, "ನೀನು ಸುಮ್ಮನಿರು, ನಮಗೆ ನಮ್ಮ ಇಚ್ಛೆಯಂತೆ ತೀರ್ಮಾಣ ಮಾಡುವ ಹಕ್ಕಿದೆ" ಬಳಿಕ ಅವರು ಯಾವುದಾದರೂ ಹಿರಿಯ ವ್ಯಕ್ತಿಯನ್ನು ಕಳುಹಿಸಲು ತೀರ್ಮಾನಿಸಿದರು ಆ ಪ್ರಕಾರ ಉರ್ವ ಬಿನ್ ಸಕ್‌ಫಿಯನ್ನು ಆರಿಸಿದರು. ಉರ್ವ ಹೇಳಿದರು, "ಕುರೈಷರೇ! ನೀವು ಮುಹಮ್ಮದರ ಬಳಿಯಿಂದ ಕಾರ್ಯ ಸಾಧಿಸದೆ ಬಂದವರೊಂದಿಗೆ ಹೇಗೆ ವರ್ತಿಸುತ್ತೀರೆಂದು ನಾನು ನೋಡಿ ಆಗಿದೆ. ನೀವು ನನ್ನ ಪಿತರೆಂದೂ ನಾನು ನಿಮ್ಮ ಪುತ್ರನೆಂದೂ ನೀವು ತಿಳಿದುಕೊಂಡಿದ್ದೀರಿ...?"

ಜನರು ಹೇಳಿದರು "ನೀವು ಸತ್ಯ ಹೇಳಿದಿರಿ ನೀವು ನಮ್ಮ ದೃಷ್ಟಿಯಲ್ಲಿ ವಿಶ್ವಸ್ಥ ವ್ಯಕ್ತಿ ಆಗಿರುತ್ತೀರಿ."

ಉರ್ವ ಆ ಸಮುದಾಯದಲ್ಲಿ ಸರದಾರರಂತಿದ್ದರು. ಸಮುದಾಯದಲ್ಲಿ ಅವರಿಗೆ ದೊಡ್ಡ ಸ್ಥಾನಮಾನವಿತ್ತು. ಉರ್ವ ಹೊರಟರು. ಪ್ರವಾದಿ(ಸ)ರವರ ಬಳಿಗೆ ತಲುಪಿ ಅವರಿಗೆ ಮುಖಾಮುಖಿಯಾಗಿ ಕುಳಿತುಕೊಂಡು ಹೇಳಿದರು, "ಮುಹಮ್ಮದ್! ನೀನು ಈ ಉಡಾಳರನ್ನು ಸೇರಿಸಿಕೊಂಡು ಬಂದು ಈ ಪಟ್ಟಣವನ್ನು ವಶಪಡಿಸಿಕೊಳ್ಳಬಯಸಿದ್ದಿಯೇನು? ನೀನೇನು ತಿಳಿದುಕೊಂಡಿದ್ದಿ? ಇವರು ಕುರೈಷರು, ಕುರೈಷರು ನಿನ್ನ ಮೇಲೆ ಯುದ್ಧ ಘೋಷಿಸಿದ್ದಾರೆ. ಯುವಕರು ಒಂಟೆಯ ಮೇಲೇರಿಕೊಂಡು ತಮ್ಮ ಮಕ್ಕಳೊಂದಿಗೆ ಸಿದ್ಧರಾಗಿದ್ದಾರೆ. ಈ ಪಟ್ಟಣದೊಳಗೆ ಯಾರನ್ನೂ ಬಲವಂತವಾಗಿ ಒಳಪ್ರವೇಶಿಸಲು ಬಿಡುವುದಿಲ್ಲವೆಂದು ಅವರು ಅಲ್ಲಾಹನೊಂದಿಗೆ ಪ್ರಮಾಣ ಮಾಡಿದ್ದಾರೆ. ಅಲ್ಲಾಹನಾಣೆ! ಹಾಗೇನಾದರೂ ಸಂಭವಿಸಿದರೆ, ನಾನು ನೋಡುತ್ತಿರುವ ನಿನ್ನೀ ಸಿಪಾಯಿಗಳು ನಾಳೆ ನಿನ್ನನ್ನು ಕೈ ಬಿಟ್ಟು ಓಡಿಹೋಗಿ ಬಿಡುತ್ತಾರೆ".

ಅಬೂಬಕರ್(ರ) ಪ್ರವಾದಿ(ಸ)ರವರ ಪಕ್ಕದಲ್ಲಿ ನಿಂತಿದ್ದರು. ಉರ್ವನ ಈ ಮಾತನ್ನು ಕೇಳಿ ಅವರು ಕ್ರೋಧಗೊಂಡು ಹೇಳಿದರು, "ಹೋಗು, ಹೋಗು.. ಹೋಗಿ ಲಾತನ ಗುಹ್ಯಾಂಗವನ್ನು ನೆಕ್ಕು... ಏನು? ನಾವು ಅಲ್ಲಾಹನ ಸಂದೇಶವಾಹಕರನ್ನು ಕೈ ಬಿಟ್ಟು ಓಡುವುದೇ..?"

ಈ ತೀಕ್ಷ್ಣವಾದ ಮತ್ತು ಆಕ್ರೋಶ ಪೂರ್ಣ ಉತ್ತರಕೇಳಿ ಆ ಸಮುದಾಯದ ನಾಯಕ ಕಕ್ಕಾಬಿಕ್ಕಿಯಾಗಿ ಬಿಟ್ಟನು. ಅವನು ಇಂತಹಾ ಉತ್ತರವನ್ನು ನಿರೀಕ್ಷಿಸಿರಲೇ ಇಲ್ಲ. ಆದರೆ ಅವನಿಗೆ ಅಡರಿ ಹೋಗಿದ್ದ ಅಹಂಕಾರವನ್ನು ಇಳಿಸಲು ಇಂತಹಾ ಉತ್ತರವೇ ಬೇಕಾಗಿತ್ತು.

ಉರ್ವ ತೀಕ್ಷ್ಣ ಪ್ರತಿಕ್ರಿಯಿಂದ ಇಳಿದು ಹೋದನು. ಬಳಿಕ ಸ್ವಲ್ಪ ಸುಧಾರಿಸಿಕೊಂಡು ಉತ್ತರ ಕೊಟ್ಟವರ ಕುರಿತು ಕೇಳಿದ "ಮುಹಮ್ಮದ್! ಇದು ಯಾರು...?"

"ಇದು ಇಬ್ನ್ ಅಬೀ ಖುಹಾಫ ಆಗಿದ್ದಾರೆ" ಪ್ರವಾದಿ (ಸ) ಉತ್ತರಿಸಿದರು. ಅವನೀಗ ಅಬೂಬಕರ್(ರ)ರನ್ನು ಉದ್ದೇಶಿಸಿಕೊಂಡು ಹೇಳಿದ "ನನ್ನ ಮೇಲೆ ನಿಮ್ಮ ಒಂದು ಋಣ ಇರದೇ ಇರುತ್ತಿದ್ದರೆ ನಾನು ನಿನಗೆ ಸರಿಯಾದ ಉತ್ತರ ಕೊಡುತ್ತಿದ್ದೆ. ಆದ್ದರಿಂದ ನನ್ನ ಮೌನವು ಆ ಋಣಕ್ಕೆ ಪ್ರತ್ಯುತ್ತಪಕಾರವೆಂದು ತಿಳಿ". ಆ ಬಳಿಕ ಉರ್ವ ಅಂತಹಾ ಕಠಿಣ ಶಬ್ದವನ್ನು ಉಪಯೋಗಿಸಲಿಲ್ಲ. ಅವನು ಪ್ರವಾದಿ(ಸ)ರೊಂದಿಗೆ ಮಾತುಕತೆಯ ಮಧ್ಯೆ ಅವರ ಗಡ್ಡವನ್ನು ಮುಟ್ಟುತ್ತಿದ್ದ. ಮುಗೈರ ಬಿನ್ ಶುಅ್‌ಬ ಸಕಫಿ(ರ) ತಲೆಯಿಂದ ಕಾಲಿನ ತನಕ ಯುದ್ಧ ಕವಚವನ್ನು ಧರಿಸಿಕೊಂಡು ಪ್ರವಾದಿ(ಸ)ರವರ ಹಿಂದೆ ನಿಂತಿದ್ದರು. ಅವರು ತನ್ನ ಖಡ್ಗದ ತುದಿಯಿಂದ ಅವನ ಕೈಯನ್ನು ಸರಿಸುತ್ತಿದ್ದರು. ಉರ್ವ ಮತ್ತೊಮ್ಮೆ ಪ್ರವಾದಿ(ಸ)ರವರ ಗಡ್ಡವನ್ನು ಮುಟ್ಟಲು ಪ್ರಯತ್ನಿಸಿದಾಗ ಮತ್ತೆ ಮುಗೈರ(ರ) ಖಡ್ಗದ ತುದಿಯಿಂದ ಅವನ ಕೈಯನ್ನು ಸರಿಸಿದರು. ಮೂರನೇ ಸಲ ಅವನು ಕೈ ಚಾಚಿದಾಗ ಮುಗೈರ(ರ) ಹೇಳಿದರು, "ನಿನ್ನ ಕೈಯನ್ನು ಪ್ರವಾದಿ(ಸ)ರವರ ಮುಖದಿಂದ ದೂರವಿಡು ಅನ್ಯಥಾ ಅದು ಮತ್ತೆ ನಿನ್ನ ಕಡೆ ಮರಳಿ ಬರಲಾರದು."

ಉರ್ವ ಹೇಳಿದ : ನಿನಗೆ ಕೆಟ್ಟದಾಗಲಿ, ನೀನೆಂತಹಾ ಕಠಿಣ ಹೃದಯದವ... ಮುಹಮ್ಮದ್! ಇದು ಯಾರು?

ಅಲ್ಲಾಹನ ಪ್ರವಾದಿ(ಸ) ನಸುನಗುತ್ತಾ ಉತ್ತರಿಸಿದರು, "ಇದು ನಿಮ್ಮ ಭಾತೃಜ ಮುಗೈರ ಬಿನ್ ಶುಅಬ(ರ)ರವರಾಗಿದ್ದಾರೆ."

ಉರ್ವ ಹೇಳಿದ, "ಅರೆ ಓ ಅಪಶಕುನವೇ! ನೀನು ನಿನ್ನೆಯಷ್ಟೇ ನಿನ್ನ ಗುಪ್ತಾಂಗಳನ್ನು ತೊಳೆಯಲು ಕಲಿತಿದ್ದಿಯಾ.."

ಉರ್ವ ಸ್ವಲ್ಪ ಸಮಯ ಮೌನ ವಹಿಸಿದ. ನಂತರ ಅವನು ಕುರೈಷರ ಬಳಿಗೆ ಮರಳಿ ಹೋದ. ಕುರೈಷರ ನೇತೃತ್ವವನ್ನು ಉದ್ದೇಶಿಸಿ ಅವನು ಹೇಳಿದ.., "ಹೇ ಕುರೈಷರೇ! ಅಲ್ಲಾಹನಾಣೆ! ನಾನು ಕೈಸರ್, ಕಿಸ್ರಾ, ನಜಾಶಿಯವರ ಆಸ್ಥಾನವನ್ನು ಕಂಡಿದ್ದೇನೆ. ಮುಹಮ್ಮದ್(ಸ)ರನ್ನು ಅವರ ಸಹವರ್ತಿಗಳು ಅನುಸರಿಸುವ ರೀತಿಯಲ್ಲಿ ಇತರ ಯಾರ ಅನುಯಾಯಿಗಳೂ ಅವರ ಬಾದಶಾಹರನ್ನು ಅನುಸರಿಸುವುದನ್ನು ನಾನು ಕಂಡಿಲ್ಲ."

ಇದನ್ನು ಕೇಳಿ ಕುರೈಷರ ಹೃದಯಕ್ಕೆ ಬರೆ ಎಳೆದಂತಾಯಿತು. ಇದಕ್ಕಿಂತ ಮೊದಲು ಅವರಿಗೆ ಈ ರೀತಿಯ ಆಘಾತ ಆದದ್ದಿಲ್ಲ. ಈಗ ಸುಹೈಲ್ ಬಿನ್ ಅಮ್ರೂರನ್ನು

ಪ್ರವಾದಿ(ಸ)ರವರನ್ನು ಕಂಡು ಸಂಧಿ ಏರ್ಪಡಿಸಲು ಹುದೈಬಿಯಾಕ್ಕೆ ಕಳುಹಿಸಿದರು. ಪ್ರವಾದಿ(ಸ)ಅವರು ಬರುತ್ತಿರುವುದನ್ನು ಕಂಡೇ ಹೇಳಿದರು, "ಈಗ ಹಿಡಿತವು ಸ್ವಲ್ಪ ಸಡಿಲಾದಂತಾಯಿತು".

ಬಳಿಕ ಮುಸಲ್ಮಾನರು ಮತ್ತು ಮಕ್ಕಾ ಮುಶ್ರಿಕರ ನಡುವೆ ಕರಾರು ಏರ್ಪಟ್ಟಿತು.❹

ಪ್ರವಾದಿವರ್ಯರು(ಸ) ಜನರ ಪ್ರಕೃತಿಯನ್ನು ಅರ್ಥ ಮಾಡಿಕೊಳ್ಳುತ್ತಿದ್ದರು. ಅವರೊಂದಿಗೆ ವ್ಯವಹರಿಸುವಾಗ ಅವರಿಗೆ ತಕ್ಕುದಾದ ರೀತಿನೀತಿಯನ್ನು ಬಳಸುತ್ತಿದ್ದರು. ಪಾವನ ಜೀವನದ ಈ ಪರಿಶುದ್ಧ ಅಧ್ಯಾಯನ ಕೆಲವು ಹೃದಯಂಗಮ ನೋಟವನ್ನು ಈ ಮೇಲೆ ಪ್ರಸ್ತಾಪಿಸಲಾದ ಹುದೈಬಿಯ ಸಂಧಿಯ ಸಂದರ್ಭದಲ್ಲಿ ಕಾಣಬಹುದಾಗಿದೆ.

ಜನರ ವಿಭಿನ್ನ ಮನೋಭಾವಗಳನ್ನು ಅವರೊಂದಿಗೆ ಮಾತುಕತೆ ನಡೆಸುವಾಗಲೂ ಕಂಡುಕೊಳ್ಳಲು ಸಾಧ್ಯವಿದೆ. ಒಮ್ಮೆ ನಾನು ಜುಮ್ಮಾ ಖುತ್ಬದಲ್ಲಿ ಅಮೀರುಲ್ ಮುಲ್‌ಮಿನೀನ್ ಉಮರ್ ಬಿನ್ ಖತ್ತಾಬ್(ರ)ರವರು ಹುತಾತ್ಮರಾದ ಘಟನೆಯನ್ನು ಪ್ರಸ್ತಾಪಿಸುತ್ತಿದ್ದೆ. ಮಜೂಸಿ ಅಬೂಲುಉಲುಅ ಖಲೀಫ(ರ)ರವರ ಮೇಲೆ ಹೇಗೆ ದಾಳಿ ಮಾಡಿದ ನೆಂಬುದನ್ನು ವಿವರಿಸುವಾಗ ನಾನು ನನ್ನ ಧ್ವನಿಯನ್ನು ತುಸು ಏರಿಸುತ್ತಾ ಹೇಳಿದೆ. "ಬಳಿಕ ಅಬೂಲುಉಲುಅ ಮೆಹರಾಬ್‌ನ ಒಂದು ಮೂಲೆಯಿಂದ ಪ್ರತ್ಯಕ್ಷನಾದನು ಮತ್ತು ತನ್ನ ಕೈಯಲ್ಲಿದ್ದ ಹರಿತವಾದ ಖಂಜರ್(ಕತ್ರಿ)ಯಿಂದ ಉಮರ್(ರ)ರವರ ಮೇಲೆ ಮೂರು ಭಾರಿ ದಾಳಿ ಮಾಡಿದ. ಪ್ರಥಮವಾಗಿ ಅವನು ಅವರ ಎದೆಯಿಟ್ಟು ತಿವಿದನು, ಎರಡನೇ ಸಲ ಅವರ ಹೊಟ್ಟೆಗೆ ಕತ್ತಿಯಿಂದ ಬಲವಾಗಿ ಇರಿದನು. ನಂತರ ತನ್ನೆಲ್ಲ ಶಕ್ತಿ ಉಪಯೋಗಿಸಿಕೊಂಡು ಹೊಕ್ಕುಳ ಕೆಳಗೆ ಕತ್ತಿಯನ್ನು ತೂರಿಸಿ ಬಿಟ್ಟನು. ಅವನು ಕತ್ತಿಯನ್ನು ಹೊರಗೆಳೆದಾಗ ಉಮರ್(ರ)ರವರ  ಕರುಳು ಕೂಡಾ ಹೊರ ಬಂದಿತ್ತು"

ನಾನು ಜನರ ಮುಖದಲ್ಲಿ ನನ್ನೀ ಮಾತಿನ ಪ್ರಭಾವವನ್ನು ಪರಿಶೀಲಿಸ ತೊಡಗಿದೆ. ಕೆಲವರಂತೂ ಸಂಪೂರ್ಣವಾಗಿ ಅವರ ಕಣ್ಣನ್ನು ಮುಚ್ಚಿಕೊಂಡಿದ್ದರು. ಘಟನೆ ಅವರ ಕಣ್ಣ ಮುಂದೆಯೇ ಘಟಿಸುತ್ತಿದೆ ಎನ್ನುವಂತೆ, ಕೆಲವರು ಅತ್ತುಬಿಟ್ಟರು ಮತ್ತು ಕೆಲವರು ಯಾವುದೇ ರೀತಿಯ ಪ್ರಭಾವ ಅವರ ಮೇಲೆ ಉಂಟಾಗದವರಂತೆ ಆಲಿಸುತ್ತಿದ್ದರು. ಮಲಗುವಾಗ ಕತೆ ಆಲಿಸುವಂತೆ.

ಜನರಲ್ಲಿ ಇಂತಹಾ ಮನೋಭಾವದ ಜನರು ಬಹಳ ಸಂಖ್ಯೆಯಲ್ಲಿ ಸಿಗುತ್ತಾರೆ. ಅವರು ಬಹಳ ಸಂಕುಚಿತ ಮನೋಭಾವದವರಾಗಿದ್ದಾರೆ. ಅವರು ತಮ್ಮ ಮಾತಿನಲ್ಲಿ ಉತ್ತಮ ಪದಗಳನ್ನು ಉಪಯೋಗಿಸುವುದಾಗಲೀ... ತಮ್ಮೆದುರಿಗಿರುವವರ ಭಾವನೆಗಳ ಗೌರವಿಸುವುದಾಗಲೀ ಅವಶ್ಯವೆಂದು ತಿಳಿದುಕೊಳ್ಳುವುದೇ ಇಲ್ಲ.

ಇಂತಹಾ ಮನೋಭಾವದ ಒಬ್ಬ ವ್ಯಕ್ತಿ ತುಂಬಿದ ಒಂದು ಸಭೆಯಲ್ಲಿ ಯಾವುದೋ ವ್ಯಾಪಾರಿಯೊಂದಿಗೆ ಒಂದು ಘಟನೆಯನ್ನು ಹಂಚಿಕೊಳ್ಳುತ್ತಿದ್ದರು. ಈ ಮಧ್ಯೆ ಅವರು ಹೇಳ ತೊಡಗಿದರು "ಈ ವ್ಯಾಪಾರಿ ಕತ್ತೆಯಂತೆ ದಷ್ಟಪುಷ್ಟವಾಗಿದ್ದ ಬಿಲ್ಕುಲ್ ಖಾಲಿದ್‌ನಂತೆ"

ಎನ್ನುತ್ತಾ ಅಲ್ಲೇ ಎದುರಿಗಿದ್ದ ಒಬ್ಬ ವ್ಯಕ್ತಿಯ ಕಡೆಗೆ ಬೆರಳು ತೋರಿಸಿದ. ಇದೆಂತಹಾ ವಿಪರ್ಯಾಸ?, ಆ ವ್ಯಕ್ತಿ ಕತ್ತೆಯಂತಿದ್ದ ಎನ್ನುವುದಕ್ಕೂ ಖಾಲಿದ್‌ನ ಕಡೆ ಬೆರಳು ತೋರಿಸುವುದಕ್ಕೂ ಏನಾದರೂ ಸಂಬಂಧವಿದೆಯೇ? ಖಂಡಿತವಾಗಿಯೂ ಇದು ಅಸಂಬದ್ಧ ಮತ್ತು ಅತಿರೇಕದ ನಡವಳಿಕೆಯಾಗಿದೆ. ಆದರೆ ಮಾಡುವುದೇನು...? ಕೆಲವು ಜನರು ಇರುವುದೇ ಹೀಗೆ..

ಕೊನೆಗೊಳಿಸುವುದಕ್ಕಿಂತ ಮೊದಲು ಒಂದು ಮುಖ್ಯ ಪ್ರಶ್ನೆಗೆ ಉತ್ತರ ಕಂಡುಕೊಳ್ಳಲು ಪ್ರಯತ್ನಿಸೋಣ.. ಮನುಷ್ಯನ ಪ್ರಕೃತಿಯಲ್ಲೇ ಸೇರಿ ಹೋದ ಗುಣ ಅಥವಾ ಮನೋಭಾವವನ್ನು ಬದಲಿಸುವುದು ಸಾಧ್ಯವೇ...? ಖಂಡಿತವಾಗಿಯೂ ಸಾಧ್ಯವಿದೆ.

ಅಮೀರುಲ್ ಮುಅ್‌ಮಿನೀನ್ ಉಮರ್(ರ) ಒರಟು ಸ್ವಭಾವ–ಕಠಿಣ ನಿಲುವಿನ ವ್ಯಕ್ತಿಯಾಗಿದ್ದರೆನ್ನುವುದನ್ನು ನೀವು ಕೇಳಿರಬಹುದು. ಆದರೆ ಇಸ್ಲಾಮ್ ಅವರಲ್ಲಿ ಎಂತಹಾ ಪರಿವರ್ತನೆ ಉಂಟು ಮಾಡಿತು ಎನ್ನುವುದಕ್ಕೊಂದು ಉದಾಹರಣೆಯನ್ನು ಕೊಡುತ್ತೇನೆ. ನೋಡಿ,

ಒಂದು ದಿನ ಒಬ್ಬ ವ್ಯಕ್ತಿ ತನ್ನ ಪತ್ನಿಯೊಂದಿಗೆ ಜಗಳಾಡಿದ. ಪತ್ನಿಯ ಕುರಿತು ದೂರು ತೆಗೆದುಕೊಂಡು ಉಮರ್(ರ)ರವರ ಬಳಿಗೆ ಬಂದ. ಅವನು ಉಮರ್(ರ)ರವರ ಮನೆಯ ಬಾಗಿಲಿಗೆ ಬಂದು ತಲುಪಿ ಕದತಟ್ಟಬೇಕೆನ್ನುವಾಗ ಒಳಗಿನಿಂದ ಉಮರ್(ರ)ರವರ ಪತ್ನಿ ಉಮರ್(ರ)ರವರ ಮೇಲೆ ರೇಗಾಡುತ್ತಿರುವುದನ್ನು ಆಲಿಸಿದ. ಉಮರ್(ರ) ಸುಮ್ಮನೆ ನಿಂತು ಪತ್ನಿಯ ಚೀರಾಟವನ್ನು ಆಲಿಸುತ್ತಿರುವುದನ್ನು ಗಮನಿಸಿದ. ಅವನು ಆಶ್ಚರ್ಯಗೊಂಡು ಮರಳಲು ಅನುವಾದ.

ಉಮರ್(ರ) ಬಾಗಿಲಲ್ಲಿ ಯಾರೊ ಬಂದು ಹೋದಂತಾಗಿ ಹೊರಬಂದು ನೋಡುವಾಗ ಆ ವ್ಯಕ್ತಿ ತುಸುದೂರದಲ್ಲಿ ಮರಳಿ ಹೋಗುತ್ತಿದ್ದರು. ಅವರು ಅಲ್ಲಿಂದಲೇ ಜೋರಾಗಿ ಕೇಳಿದರು "ನಿಮ್ಮ ಸಂಗತಿ ಏನು?"

ಅವನು ಹೇಳಿದ, "ಅಮೀರುಲ್ ಮುಅ್‌ಮಿನೀನ್! ನಾನು ನಿಮ್ಮ ಬಳಿಗೆ ನನ್ನ ಪತ್ನಿಯ ಕುರಿತು ದೂರು ತಂದಿದ್ದೆ. ಆದರೆ ನಿಮ್ಮ ಪತ್ನಿ ನಿಮ್ಮನ್ನು ದಬಾಯಿಸುತ್ತಿರುವುದನ್ನು ಕಂಡು ಹಿಂತೆರಳಿದೆ"

ಉಮರ್(ರ) ಹೇಳಿದರು,

ಸಹೋದರಾ...! ಅವಳು ನನ್ನ ಬಾಳ ಸಂಗಾತಿಯಾಗಿದ್ದಾಳೆ. ಅವಳು ನನ್ನ ದೈಹಿಕ ಅವಶ್ಯಕತೆಯನ್ನು ಪೂರೈಸುತ್ತಾಳೆ. ನನಗಾಗಿ ಊಟ ತಯಾರಿಸುತ್ತಾಳೆ, ನನ್ನ ವಸ್ತ್ರ ಒಗೆದು ಕೊಡುತ್ತಾಳೆ. ಹೀಗಿರುವಾಗ ನಾನು ಅವಳ ಬಿರುಸು ಮಾತುಗಳನ್ನು ಸಹಿಸಿಕೊಳ್ಳುವುದಿಲ್ಲ ಅಂದರೆ ಹೇಗೆ...?"❺ ಇದು ದೇವಭಯವೆಂಬ ಕೆಂಡವು ಎಂತಹಾ ಕಠಿಣ ಲೋಹದಂತಹಾ ಹೃದಯವನ್ನೂ ಬಾಗಿಸುತ್ತದೆ ಎನ್ನುವುದಕ್ಕಿರುವ ಸುಸ್ಪಷ್ಟ ಉದಾಹರಣೆಯಾಗಿದೆ.

ಇನ್ನು ಕೆಲವರ ಒರಟು ನಡವಡಿಗಳಿಗೆ ಯಾವುದೇ ಔಷಧಿ ಫಲಪ್ರಧವಾಗುವುದಿಲ್ಲ. ಇಂತಹಾ ಔಷದಿ ಇಲ್ಲದ ರೋಗಕ್ಕೆ ಮದ್ದು ಮಾಡುವುದಕ್ಕಿಂತ ಅಂತಹಾ ಜನರಿಂದ ಅಂತರ ಕಾಯ್ದುಕೊಳ್ಳುವುದೇ ಜಾಣತನವಾಗಿದೆ. ಕೆಲವು ಯುವಕರು ಅವರ ತಂದೆಯವರ ಕಠಿಣ ಮನೋಭಾವಗಳ ಕುರಿತು ನನ್ನೊಂದಿಗೆ ದೂರಿದರು. ನಾನು ಅವರಿಗೆ ಪರಿಹಾರೋಪಾಯಗಳನ್ನು ಸೂಚಿಸಿದೆ. ಆ ಪೈಕಿ ಒಬ್ಬ ಯುವಕ ಈ ಎಲ್ಲಾ ಉಪಾಯಗಳನ್ನು ಹೂಡಿ ಆಗಿದೆ ಆದರೂ ಯಾವುದೇ ಬದಲಾವಣೆ ಇಲ್ಲ ಎಂದು ಹೇಳಿದ. ಇನ್ನು ಈ ಸಮಸ್ಯೆಗೆ ನಾವೇನು ಮಾಡೋಣ..?

ನನ್ನ ಬಳಿ ಈ ಸಮಸ್ಯೆಗಿರುವ ಒಂದೇ ಒಂದು ಪರಿಹಾರ ಸೂತ್ರ ಅದು ಸಹನೆಯಾಗಿದೆ. ಇಂತಹಾ ಒರಟು ಸ್ವಭಾವದ ಜನರ ನಡವಳಿಕೆಗಳಿಗೆ ಕೇವಲ ಸಹನೆಯಿಂದ ಪ್ರತಿಕ್ರಿಯಿಸಬೇಕಾಗಿದೆ. ಅವರಲ್ಲಿರುವ ಒಳಿತನ್ನು ಪರಿಗಣಿಸಿಕೊಂಡು ಕೆಡುಕನ್ನು ಅವಗಣಿಸಬೇಕಾಗಿದೆ. ಪರಿಸ್ಥಿತಿಯನ್ನೂ ಮನೋಭಾವವನ್ನೂ ಬದಲಿಸಲು ನಿರಂತರ ಪ್ರಯತ್ನಿಸುತ್ತಿರಬೇಕಾಗಿದೆ. ಏಕೆಂದರೆ ಕೆಲವು ಸಮಸ್ಯೆಗಳಿಗೆ ಪರಿಹಾರವೇ ಇರುವುದಿಲ್ಲ.

**ಉಪಸಂಹಾರ :**

**“ನೀವು ವ್ಯವಹರಿಸುವ ಜನರ ಮನೋಭಾವವನ್ನು ಅರ್ಥೈಸಿಕೊಂಡರೆ ನಿಮ್ಮ ಅರ್ದ ಸಮಸ್ಯೆ ಕಡಿಮೆಯಾದಂತೆ”**

❶ ಸುನನು ಅಬೂದಾವೂದ್ ಹದೀಸ್ 4693,
ಔಮಿಉತಿರ್ಮುದಿ 2955

❷ ಸಹೀಹ್ ಮುಸ್ಲಿಮ್ 2766

❸ ಸಹೀಹ್ ಮುಸ್ಲಿಮ್ 1780, ಮುಸ್ನದ್ ಅಹ್ಮದ್ 2/538

❹ ಸಹೀಹುಲ್ ಬುಖಾರಿ 2731, 2732

❺ ಈ ವರದಿ ನಮಗೆ ಲಭಿಸಿಲ್ಲ.

# ಅಮೀರುಲ್ ಮುಅ್‌ಮಿನೀನ್ ಮುಅವಿಯ(ರ)ರವರ ಹಗ್ಗ

ಅವರು ಹೈಯರ್ ಸೆಕೆಂಡರಿ ಶಾಲೆಯ ಅಂತಿಮ ವರ್ಷದ ವಿದ್ಯಾರ್ಥಿಗಳಿಗೆ ಗಣಿತ ಶಾಸ್ತ್ರವನ್ನು ಕಲಿಸುತ್ತಿದ್ದರು. ತರಗತಿಯಲ್ಲಿ ಕೆಲವು ಮಕ್ಕಳು ಪಾಠದಲ್ಲಿ ಶ್ರದ್ಧೆ ವಹಿಸದಿರುವುದನ್ನು ಅವರು ಕೆಲವು ದಿನಗಳಿಂದಲೂ ಗಮನಿಸುತ್ತಿದ್ದರು. ಅವರು ಕಲಿಯುವ ನಿಟ್ಟಿನಲ್ಲಿ ಅವಗಣನೆ ತೋರುತ್ತಿದ್ದರು. ಅವರು ಆ ವಿದ್ಯಾರ್ಥಿಗಳ ಮನೋಭಾವವನ್ನು ದುರಸ್ಥಿಗೊಳಿಸಲು ನಿರ್ಧರಿಸಿದರು. ಒಂದು ದಿನ ಅವರು ತನ್ನ ಪಿರೇಡ್‌ಗಾಗಿ ತರಗತಿಗೆ ಪ್ರವೇಶಿಸಿದರು ಮತ್ತು ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಲೇ ಹೇಳಿದರು "ಎಲ್ಲಾ ವಿದ್ಯಾರ್ಥಿಗಳೂ ನಿಮ್ಮ ಪುಸ್ತಕದ ಚೀಲವನ್ನು ಬದಿಗಿಟ್ಟು ಕಾಗದ ಮತ್ತು ಪೆನ್ ತೆಗೆದುಕೊಳ್ಳಿರಿ" ವಿದ್ಯಾರ್ಥಿಗಳು ಕೇಳಿದರು; ಏಕೆ ಸರ್...?

"ಟೆಸ್ಟ್.., ಹಂಗಾಮಿ ಟೆಸ್ಟ್" ಗುರುಗಳು ಬಹಳ ಸ್ಫೂರ್ತಿಯಿಂದಲೇ ಹೇಳಿದರು, ವಿದ್ಯಾರ್ಥಿಗಳು ಒಂದು ಕ್ಷಣ ದಂಗಾದರು. ಆದರೆ ನಂತರ ಒಲ್ಲದ ಮನಸ್ಸಿನಿಂದ ಗುರುಗಳ ಮಾತನ್ನು ಅನುಸರಿಸತೊಡಗಿದರು. ವಿದ್ಯಾರ್ಥಿಗಳಲ್ಲಿ ಅಸಭ್ಯ ವರ್ತನೆಗೆ ಹೆಸರುವಾಸಿಯಾದ ಒಬ್ಬ ವಿದ್ಯಾರ್ಥಿ ಇದ್ದ. ಜಂಭ ಮತ್ತು ಕೋಪ ಅವನ ಅಸ್ತ್ರಗಳಾಗಿತ್ತು. ಅವನು ಜೋರಾಗಿ ಚೀರುತ್ತಾ ಹೇಳಿದ.

"ಸರ್! ಈಗ ನಾವು ಟೆಸ್ಟ್ ಕೊಡಲು ಬಯಸುವುದಿಲ್ಲ. ಮೊದಲು ನಾವೊಮ್ಮೆ ರಿವಿಜನ್ ಮಾಡಿಕೊಳ್ಳುತ್ತೇವೆ. ನಂತರ ನೀವು ಟೆಸ್ಟ್ ತೆಗೆದುಕೊಳ್ಳಿ. ನಮಗೇನೂ ನೆನಪೇ ಇಲ್ಲದಿದ್ದರೆ ನಾವು ಟೆಸ್ಟ್ ಕೊಡುವುದಾದರೂ ಹೇಗೆ?" ಗುರುಗಳು ಅವನ ಮಾತು ಕೇಳಿ ರೇಗಿ ಬಿಟ್ಟರು. ಅವರು ಕೆಂಡಾಮಂಡಲವಾಗಿ ಹೇಳಿದರು.

"ಇಲ್ಲಿ ನಿನ್ನಿಷ್ಟದಂತೆ ನಡೆಯಲಾರದು. ಟೆಸ್ಟ್ ಯಾವ ಕಾರಣಕ್ಕೂ ಕೊಡಲೇಬೇಕು. ತಿಳಿಯಿತಾ...? ನೀನು ಟೆಸ್ಟ್ ಕೊಡುವುದಿಲ್ಲವೆಂದಾದರೆ ತರಗತಿಯಿಂದ ಹೊರಗೆ ನಡಿ".

ಇದರಿಂದ ವಿದ್ಯಾರ್ಥಿಯೂ ಕ್ರೋಧಗೊಂಡನು.

"ನಾನೇಕೆ ಹೊರಗೆ ಹೋಗಬೇಕು? ನೀವು ಹೊರ ನಡೆಯಿರಿ" ಅವರೂ ಜೋರಾಗಿಯೇ ಪ್ರತಿಕ್ರಯಿಸಿದನು.

ಗುರುಗಳು ವಿದ್ಯಾರ್ಥಿಯ ವರ್ತನೆಯಿಂದ ಆಕ್ರೋಶಗೊಂಡರು. ಅವರು ಉದ್ರಿಕ್ತರಾಗಿ ವಿದ್ಯಾರ್ಥಿಯ ಕಡೆಗೆ ಧಾವಿಸುತ್ತಾ "ಹೇ ನಡತೆಗೆಟ್ಟವನೇ! ನಾಚಿಕೆ ಇಲ್ಲದವನೇ, ನೀಚ, ಮನೆಹಾಳ, ರಾಕ್ಷಸ....."

ವಿದ್ಯಾರ್ಥಿ ಕೂಡಾ ತನ್ನ ಬೆಂಚ್‌ನಿಂದ ಎದ್ದು ನಿಂತ. ನಂತರ ಏನಾಗಬಾರದಿತ್ತೊ ಅದು ನಡೆದು ಹೋಯಿತು. ಇಬ್ಬರೂ ಪರಸ್ಪರ ಎಳೆದಾಡಿದರು. ಮಾತು ಮೇರೆ

ಮೀರಿತು. ಆಡಳಿತ ವರ್ಗದವರು ಶಿಸ್ತುಕ್ರಮವಾಗಿ ವಿದ್ಯಾರ್ಥಿಯನ್ನು ಎರಡು ವರ್ಷ ಹಿಂದಕ್ಕೆ ಹಾಕಿದರು. ಮತ್ತು ಮುಚ್ಚಳಿಗೆ ಬರೆದು ತೆಗೆದುಕೊಂಡರು. ಅಧ್ಯಾಪಕರ ಗೌರವ ಕಾಪಾಡಲಾಯಿತು!

ಇದು ವಿದ್ಯಾರ್ಥಿಗೆ ಸಂಭವಿಸಿದ ಪರಿಣಾಮವಾಗಿದೆ. ಗುರುಗಳು ತದ ನಂತರ ಪ್ರತೀ ಹಿರಿಯ ಕಿರಿಯ ಜನರ ಮಾತಿಗೆ ವಿಷಯವಾದರು. ಸಮೂಹದಲ್ಲಿ ಇವರ ಕುರಿತು ವಿಮರ್ಶೆ ಪ್ರಾರಂಭವಾದವು. ಅವರು ಈ ಪರಿಸ್ಥಿತಿಯಿಂದ ವಿಚಲಿತರಾಗಿ ಶಾಲೆಯನ್ನು ತೊರೆದು ಹೋಗಿಬಿಟ್ಟರು.

ಇನ್ನೊಂದು ಉಸ್ತಾದರಿಗೂ ಇದೇ ಸಮಸ್ಯೆ ಎದುರಾಯಿತು. ಅವರು ಬಹಳ ಜಾಣತನದಿಂದ ಅದಕ್ಕೆ ಪರಿಹಾರ ಕಂಡುಕೊಂಡರು. ಅವರು ಕೂಡಾ ಒಂದು ದಿನ ಕ್ಲಾಸಿಗೆ ಬಂದು ಹೇಳಿದರು; "ಎಲ್ಲಾ ವಿದ್ಯಾರ್ಥಿಗಳೂ ಕಾಗದ ಮತ್ತು ಪೆನ್ ತೆಗೆಯಿರಿ, ಟೆಸ್ಟ್ ಇದೆ"

ಇಲ್ಲಿ ಕೂಡಾ ಒಬ್ಬ ಅಸಭ್ಯ ವಿದ್ಯಾರ್ಥಿ ಇದ್ದ. ಅವನು ಕಿರುಚುತ್ತಾ ಹೇಳಿದ; "ಸರ್! ನಿಮ್ಮ ಇಚ್ಛೆಯಂತೆ ನೀವು ವರ್ತಿಸುವಂತಿಲ್ಲ. ಟೆಸ್ಟ್‌ಗಾಗಿ ನಿಗದಿಪಡಿಸಲಾದ ಸಮಯದಲ್ಲೇ ಟೆಸ್ಟ್ ನಡೆಸಬೇಕು"

ಉಸ್ತಾದ್ ಸಹನೆ ಮತ್ತು ಸ್ಪೂರ್ತಿಯ ಶಿಖರದಂತಿದ್ದರು. ಅಸಭ್ಯರೊಂದಿಗೆ ನೇರವಾಗಿ ಮತ್ತು ಕಠಿಣವಾಗಿ ನಡೆದುಕೊಳ್ಳುವುದು ಅವಿವೇಕವಾಗಿದೆ ಎಂಬ ಅರಿವು ಅವರಿಗಿತ್ತು. ಅವರು ನಸುನಗುತ್ತಾ ಆ ವಿದ್ಯಾರ್ಥಿಯ ಕಡೆ ನೋಡಿಕೊಂಡು ಹೇಳಿದರು; "ಅಂದರೆ ನೀವು ಟೆಸ್ಟ್ ಕೊಡುವುದಿಲ್ಲ ಎಂದರ್ಥ, ಅಲ್ಲವೇ?"

ಅವನು ಮತ್ತೆ ಚೀರಾಡುತ್ತಾ ಹೇಳಿದ; 'ಹೌದು'

ಉಸ್ತಾದ್ ಅತ್ಯಂತ ನಮ್ರವಾಗಿ ಹೇಳಿದರು, "ಸರಿ. ಯಾರು ಟೆಸ್ಟ್ ಕೊಡುವುದಿಲ್ಲವೊ ಅವರೊಂದಿಗೆ ನಾವು ಟೆಸ್ಟ್ ತೆಗೆದುಕೊಳ್ಳುವುದಿಲ್ಲ"

ವಿದ್ಯಾರ್ಥಿಗಳೇ ನೀವು ಬರೆಯಿರಿ; ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ. ಎನ್ನುತ್ತಾ ಪ್ರಶ್ನಾವಳಿಯನ್ನು ಕೊಡಲಾರಂಭಿಸಿದರು. ಹಟಮಾರಿ ಹುಡುಗ ಅಸಹಾಯಕನಂತೆ ಹೇಳಿದ;

"ನಾನು ಹೇಳಿದೆನಲ್ಲವೇ ನಾನು ಟೆಸ್ಟ್ ಕೊಡುವುದಿಲ್ಲವೆಂದು...?"

"ನಿಮ್ಮೊಂದಿಗೆ ಯಾರು ಟೆಸ್ಟ್ ತೆಗೆದುಕೊಳ್ಳುತ್ತಿದ್ದಾರೆ? ನೀವು ಸ್ವತಂತ್ರರಾಗಿದ್ದೀರಿ. ನಾವು ನಿಮ್ಮಿಂದ ಟೆಸ್ಟ್ ತೆಗೆದುಕೊಳ್ಳುವುದಿಲ್ಲ".

ಈಗ ಅವನಿಗೆ ಉದ್ರೇಕಗೊಳ್ಳುವ ಯಾವ ಅವಕಾಶವೂ ಇರಲಿಲ್ಲ. ಅವನು ಶಾಂತನಾಗಿ ಕುಳಿತುಕೊಂಡು ಬಿಟ್ಟನು. ಬಳಿಕ ಕಾಗದ ಮತ್ತು ಪೆನ್ ತೆಗೆದುಕೊಂಡು ಇತರ ವಿದ್ಯಾರ್ಥಿಗಳಂತೆ ಅವನೂ ಪ್ರಶ್ನೆಗಳನ್ನು ಬರೆಯತೊಡಗಿದ. ಸಮಸ್ಯೆ ತಿಳಿಯಾಯಿತು. ನಂತರ ಅವನ ವರ್ತನೆಗಾಗಿ ಶಾಲಾ ಆಡಳಿತ ಸಮಿತಿ ಅವನ ವಿರುದ್ಧ ಶಿಸ್ತುಕ್ರಮವನ್ನೊ ಜರಗಿಸಿತು.

ಈ ಎರಡು ಘಟನೆಗಳು ನನ್ನನ್ನು ಚಿಂತನೆಗೆ ಗುರಿಪಡಿಸಿತು. ಇಂತಹಾ ಸಂದಿಗ್ಧ ಪರಿಸ್ಥಿತಿಯನ್ನು ತಾಳ್ಮೆಯಿಂದ ಎದುರಿಸುವುದು ಎಲ್ಲರ ಸಾಮರ್ಥ್ಯಕ್ಕೂ ಒಳಪಡುವ ವಿಷಯವಲ್ಲ. ನಾನು ಮನುಷ್ಯನನ್ನು ಉದ್ರಿಕ್ತಗೊಳಿಸುವ ಮತ್ತು ಅವನ ಕೋಪವನ್ನು ತಣ್ಣಗೆ ಮಾಡುವ ವಿಷಯಗಳ ಕುರಿತು ಅಧ್ಯಯನ ನಡೆಸತೊಡಗಿದೆ. ದುಡುಕು ಸ್ವಭಾವದವರೊಂದಿಗೆ ಆವೇಶ ಪೂರ್ಣವಾಗಿ ನಡೆದುಕೊಳ್ಳುವ ಪರಿಣಾಮವು ಅನಾಹುತಕಾರಿಯಾಗುತ್ತದೆ. ಇದರಿಂದ ವಿರೋಧವು ಹೆಚ್ಚುವುದಲ್ಲದೆ ಕಡಿಮೆಯಾಗುವುದಿಲ್ಲ. ಬೆಂಕಿಯನ್ನು ಬೆಂಕಿಯಿಂದ ಎದುರಿಸಿದರೆ ಅಥವಾ ಬೆಂಕಿಯನ್ನು ಬೆಂಕಿಯಿಂದಲೇ ಆರಿಸುವ ಪ್ರಯತ್ನ ಮಾಡಿದರೆ ಬೆಂಕಿಯ ತೀವ್ರತೆ ಹೆಚ್ಚುತ್ತದೆ ಮತ್ತು ಅದು ತೀವ್ರವಾಗಿ ವ್ಯಾಪಿಸತೊಡಗುತ್ತದೆ. ಅದೇ ಪ್ರಕಾರ ವಿರೋಧಿಗಳೊಂದಿಗೆ ನಾವು ವಿರೋಧಿ ಧೋರಣೆಯನ್ನೇ ಅಳವಡಿಸಿಕೊಂಡರೆ ಇಬ್ಬರ ಸಮಾಧಾನವೂ ನಷ್ಟವಾಗುವುದಲ್ಲದೆ ಇಬ್ಬರೂ ನಷ್ಟ ಅನುಭವಿಸುವಂತಾಗುತ್ತದೆ. ಆದ್ದರಿಂದ ಜನರೊಂದಿಗೆ ನಿಮ್ಮ ಸ್ವಭಾವವು ಅಮೀರುಲ್ ಮುಅ್‌ಮಿನೀನ್ ಮುಆವಿಯ(ರ)ರವರ ಹಗ್ಗದಂತೆ ಇರಬೇಕಾಗಿದೆ.

ಅಮೀರುಲ್ ಮುಅ್‌ಮಿನೀನ್ ಮುಆವಿಯಾ(ರ)ರವರೊಂದಿಗೆ ಕೇಳಲಾಯಿತು. ನೀವು ಇಪ್ಪತ್ತು ವರ್ಷ ಗವರ್ನರ್ ಸ್ಥಾನದಲ್ಲಿದ್ದವರು. ನಂತರ ಖಲೀಫ ಸ್ಥಾನವನ್ನು ಪಡೆದುಕೊಂಡು ಈಗಾಗಲೇ ಇಪ್ಪತ್ತು ವರ್ಷ ಸಲ್ಲುತ್ತಿದೆ. ಇಷ್ಟೊಂದು ಸುದೀರ್ಘ ಅವಧಿ ತನಕ ಜನರು ನಿಮ್ಮ ನೇತೃತ್ವವನ್ನು ಒಪ್ಪಿಕೊಳ್ಳಲಿರುವ ಕಾರಣವಾದರೂ ಏನು? ನೀವು ಈ ಸುದೀರ್ಘ ಅವಧಿ ತನಕ ನಾಯಕರಾಗಿ ಮೆರೆಯಲು ಕಾಯ್ದುಕೊಂಡಿರುವ ಕ್ರಮವಾದರೂ ಏನು? ಅವರು ಹೇಳಿದರು. ನನ್ನ ಮತ್ತು ಪ್ರಜೆಗಳ ಮಧ್ಯೆ ಒಂದು ಹಗ್ಗವಿದೆ. ಅದರ ಒಂದು ತುದಿ ನನ್ನ ಕೈಯಲ್ಲೂ ಇನ್ನೊಂದು ತುದಿ ಅವರ ಕೈಯಲ್ಲೂ ಇದೆ. ಆ ಕಡೆಯಿಂದ ಅವರು ಹಗ್ಗವನ್ನು ಎಳೆಯುವಾಗ, ಹಗ್ಗವು ತುಂಡಾಗದಂತೆ ನಾನು ಇಲ್ಲಿ ಅದರ ಮೇಲಿನ ನನ್ನ ಹಿಡಿತವನ್ನು ಸಡಿಲಗೊಳಿಸುತ್ತೇನೆ. ಆ ಕಡೆಯಿಂದ ಅವರು ಈ ಹಗ್ಗದ ಮೇಲಿನ ಹಿಡಿತವನ್ನು ಸಡಿಲಗೊಳಿಸಿದಾಗ ಈ ಕಡೆಯಿಂದ ನಾನದನ್ನು ಎಳೆದುಕೊಳ್ಳುತ್ತೇನೆ."❶

ಮುಆವಿಯಾ(ರ)ರವರ ಈ ಕ್ರಮವು ನಿಜವಾಗಿಯೂ ಶ್ಲಾಘನಾರ್ಹವಾಗಿದೆ. ವಾಸ್ತವದಲ್ಲಿ ಪರಸ್ಪರ ವಿರೋಧಿ ಮನೋಭಾವದ ದಂಪತಿಗಳು ಯಾವತ್ತೂ ನೆಮ್ಮದಿಯಿಂದ ದಾಂಪತ್ಯ ಸಾಗಿಸಲು ಸಾಧ್ಯವಿಲ್ಲ.ಅದೇ ಪ್ರಕಾರ ಪ್ರತಿ ವಿಷಯಕ್ಕೆ ಸಿಡುಕುವ ದುಡುಕುವ ಸ್ವಭಾವದವರೊಂದಿಗೆ ಸ್ನೇಹವೂ ಹೆಚ್ಚು ದಿನ ಬಾಳಿಕೆ ಬರುವುದಿಲ್ಲ.

ಒಮ್ಮೆ ನಾನು ಜೈಲಲ್ಲಿ ಭಾಷಣ ಮಾಡಿದೆ. ಭಾಷಣದ ವಿಷಯವನ್ನು ಪ್ರತ್ಯೇಕವಾಗಿ ಕೊಲೆ ಅಪರಾಧಿಗಳನ್ನು ಗಮನದಲ್ಲಿಟ್ಟು ಸಿದ್ಧಪಡಿಸಲಾಗಿತ್ತು. ಭಾಷಣ ಮುಗಿದಂತೆ ಎಲ್ಲರೂ ಅವರವರ ಕೊಠಿಡಿಗೆ ಹೊರಟು ಹೋದರು. ಆ ಪೈಕಿ ಒಬ್ಬನು ಕೃತಜ್ಞತೆ ಹೇಳಲು ನನ್ನ ಬಳಿ ಬಂದ. ಅವನು ಅವನನ್ನು ಪರಿಚಯಿಸುತ್ತಾ ನಾನು ಕೊಲೆ ಅಪರಾಧಿಗಳ ವಿಭಾಗದಲ್ಲಿ ಶೈಕ್ಷಣಿಕ ವ್ಯವಸ್ಥಾಪಕನಾಗಿದ್ದೇನೆಂದು ಹೇಳಿದ. ನಾನು

ಅವರೊಂದಿಗೆ, ಕೊಲೆಗೆ ಅತ್ಯಂತ ಪ್ರೇರಣೆ ನೀಡುವ ಅಂಶ ಯಾವುದು? ಎಂದು ಕೇಳಿದೆ. ಅವನು ತಡವರಿಸದೆ ಉತ್ತರಿಸಿದ. "ಕೋಪ"

"ಅಲ್ಲಾಹನಾಣೆ! ಮಹನೀಯರೇ! ಇವರಲ್ಲಿ ಕೆಲವರು ಶಾಪಿಂಗ್ ಸೆಂಟರಲ್ಲಿ ಮತ್ತು ಗ್ಯಾಸ್ ಸ್ಟೇಷನ್‌ನಲ್ಲಿ ಸಣ್ಣ ವಿಷಯಕ್ಕೆ ಕೋಪಗೊಂಡು ಕೊಲೆ ಮಾಡಿದವರಿದ್ದಾರೆ."

ಅವನ ಮಾತು ಕೇಳಿ ನನಗೆ ನೆಬಿ(ಸ)ರವರ ವಚನ ನೆನಪಿಗೆ ಬಂತು.

«لَيْسَ الشَّدِيدُ بِالصُّرَعَةِ، إِنَّمَا الشَّدِيدُ الَّذِي يَمْلِكُ نَفْسَهُ عِنْدَالْغَضَبِ»

**"(ಮಲ್ಲ ಯುದ್ಧದಲ್ಲಿ) ಇನ್ನೊಬ್ಬರನ್ನು ಕೆಡವಿ ಹಾಕುವವನು ಬಲಶಾಲಿಯಲ್ಲ. ಕೋಪವನ್ನು ನಿಯಂತ್ರಿಸುವವನೇ ವಾಸ್ತವದಲ್ಲಿ ಅತ್ಯಂತ ಬಲಶಾಲಿಯಾಗಿದ್ದಾನೆ".❷**

ಹೌದು! ಧೈಯಶಾಲಿಗಳೆಂದರೆ ಸುದೃಡ ದೇಹ ಶಕ್ತಿಶಾಲಿ ಆರೋಗ್ಯವಿದ್ದು ಎದುರಾಳಿಯನ್ನು ಮಣ್ಣು ಮುಕ್ಕಿಸುವವನಲ್ಲ. ಬದಲಾಗಿ ಅನಾವಶ್ಯಕ ವಿಷಯಗಳಿಂದ ದೂರವಿರುವವನೇ ಧೈಯಶಾಲಿ

ಪ್ರವಾದಿ(ಸ) ಹೇಳಿದರು;

«لَا يَقْضِ الْقَاضِي بَيْنَ اثْنَيْنِ وَهُوَ غَضْبَانُ»

**"ಖಾಝಿ ಕೋಪಗೊಂಡಿರುವ ಸ್ಥಿತಿಯಲ್ಲಿ ಇಬ್ಬರ ನಡುವೆ ತೀರ್ಪು ನೀಡದಿರಲಿ"❸**

ಮುಸಲ್ಮಾನರು ತಾಳ್ಮೆ ಮತ್ತು ಸಂಯಮವನ್ನು ಮೈಗೂಡಿಸಿಕೊಳ್ಳಬೇಕೆಂದು ಪ್ರವಾದಿ(ಸ) ಆದೇಶಿಸಿದ್ದಾರೆ.

«إِنَّمَا الْحِلْمُ بِا لتَّحَلُّمِ»

**"ಸಂಯಮವು ಸಂಯಮ ಪಾಲಿಸುವುದರಿಂದಲೇ ಹುಟ್ಟಿಕೊಳ್ಳುತ್ತದೆ"❹**

ಹೌದು! ಪ್ರಥಮ ಕ್ಷಣದಲ್ಲೇ ನೀವು ಕೋಪವನ್ನು ನಿಯಂತ್ರಿಸಲು ನಿಮಗೆ ಶೇಕಡಾ 100ರಷ್ಟು ಪರಿಶ್ರಮಪಡಬೇಕಾಗುತ್ತದೆ. ಆದರೆ ಎರಡನೇ ಮೂರನೆ ಮತ್ತು ನಾಲ್ಕನೇ ಭಾರಿ ನಿಮಗೆ ಅಷ್ಟೊಂದು ಒತ್ತಡವಿರುವುದಿಲ್ಲ. ಒಂದು ನಿಮಿಷದಲ್ಲೇ ಕೋಪವು ಇಳಿದು ಹೋಗುವುದು. ನಿಧಾನವಾಗಿ ಅದು ನಿಮಗೆ ಅಭ್ಯಾಸವಾಗಿ ಬಿಡುವುದು ಮತ್ತು ತಾಳ್ಮೆ, ಸಂಯಮ ನಿಮ್ಮ ಪ್ರಕೃತಿಯ ಒಂದು ಭಾಗವಾಗಿ ಬಿಡುವುದು.

ಕೋಪದ ಕುರಿತು ಒಂದು ಲಘು ಹಾಸ್ಯವನ್ನು ಓದುಗರಿಗೆ ಹಂಚಬೇಕೆಂದುಕೊಂಡಿದ್ದೇನೆ.

ಒಮ್ಮೆ ನಾನು ಜಿದ್ದದ ಉತ್ತರ ಭಾಗದಲ್ಲಿ 600 ಕಿ.ಮೀಟರ್ ದೂರದಲ್ಲಿರುವ ಒಂದು ಊರಿನಲ್ಲಿ ಭಾಷಣ ನೀಡಲು ಹೋಗಿದ್ದೆ. ಸಭಿಕರಲ್ಲಿ ಒಬ್ಬ ಯುವಕ ಅತ್ಯಂತ ದುಡುಕು ಸ್ವಭಾವದವನಿದ್ದನು. ಅವನ ಕುರಿತು ನಾನು ಅರಿತಂತೆ ಅವನೊಮ್ಮೆ ಕಾರಲ್ಲಿ ಪ್ರಯಾಣಿಸುತ್ತಿದ್ದ. ಕಾರು ಬಹಳ ನಿಧಾನವಾಗಿ ಓಡುತ್ತಿತ್ತು. ಹಿಂದಿನಿಂದ ಬಹಳ ವೇಗದಲ್ಲಿ ಒಂದು ವಾಹನ ಹಾರನ್ ಹಾಕುತ್ತಾ ಬಂತು. ಯುವಕನು ಅದಕ್ಕೆ ದಾರಿಬಿಟ್ಟುಕೊಡುವ ಬದಲಿಗೆ ಕಾರಿನ ವೇಗವನ್ನು ಇನ್ನಷ್ಟು ಕಡಿಮೆಗೊಳಿಸಿದನು ಮಾತ್ರವಲ್ಲದೆ ಹಿಂದಿನ ವಾಹನದವನಿಗೆ ವೇಗವನ್ನು ಕಡಿಮೆಗೊಳಿಸುವಂತೆ ಸಂಕೇತ ಮಾಡಿದನು. ಹಿಂದಿನ ವಾಹನದವರು ಬೇಸರಗೊಂಡು ಅವರ ವಾಹನವನ್ನು ರಸ್ತೆಯಿಂದ ಇಳಿಸಿಕೊಂಡು ವೇಗವಾಗಿ ಮುಂದೆ ಸಾಗಿದರು. ಅವರ ಈ ಕೆಲಸದಿಂದ ಈ ಯುವಕ ಉದ್ರಿಕ್ತನಾದನು, ಮೊದಲೇ ಹೇಳಿದಂತೆ ಅವನು ಅತ್ಯಂತ ದುಡುಕು ಸ್ವಭಾವದವನಾಗಿದ್ದ, ಅವನು ಅದನ್ನು ಅವನಿಗೆ ಮಾಡಿದ ಅಪಮಾನವೆಂದು ತಿಳಿದ ಅವನು ತನ್ನ ಕಾರಿನ ವೇಗವನ್ನು ಹೆಚ್ಚಿಸಿದ. ಮುಂದಿನ ವಾಹನದ ಸಮೀಪಕ್ಕೆ ಹೋಗಿ ಅವರನ್ನು ನಿಲ್ಲಿಸುವಂತೆ ಹೇಳಿದ. ಅವರು ಅವರ ವಾಹನವನ್ನು ನಿಲ್ಲಿಸಿದರು. ಯುವಕ ತನ್ನ ಶಿರವಸ್ತ್ರ (ಅರಬಿಗಳು ಧರಿಸುವುದು)ವನ್ನು ಬದಿಗೆಸೆದು ಕೈಯಲ್ಲಿ ಕಬ್ಬಿಣದ ರಾಡನ್ನು ಹಿಡಿದುಕೊಂಡು ಕೋಪದಿಂದ ಇಳಿದು ಆ ವಾಹನದ ಕಡೆಗೆ ನಡೆದ. ಆ ವಾಹನದ ಬಾಗಿಲು ತೆರೆಯಿತು. ಅದರಿಂದ ಕಟ್ಟುಮಸ್ತಿನ ಮೂರು ಯುವಕರು ಕೆಳಗಿಳಿದರು. ಗಲಾಟೆಗೆ ಸಿದ್ಧವಾಗಿ ಬರುತ್ತಿರುವ ಅವನನ್ನು ಕಂಡು ಅವರೂ ಹೊಡೆದಾಟಕ್ಕೆ ಸಿದ್ಧರಾಗಿ ಅವನ ಕಡೆಗೆ ಧಾವಿಸಿದರು. ಮೂವರು ಆಕ್ರಮಣಕ್ಕೆ ಸಿದ್ಧರಾಗಿ ಬರುತ್ತಿರುವುದನ್ನು ಕಂಡು ಯುವಕ ಕಂಗಾಲಾದನು. ಅವರು ಮೂವರು ಅವನ ಬಳಿಗೆ ತಲುಪಿದರು. ಅವನ ಕೈಯಲ್ಲಿದ್ದ ಕಬ್ಬಿಣದ ರಾಡನ್ನು ದುರುಗುಟ್ಟಿ ನೋಡಲಾರಂಭಿಸಿದರು. ಯುವಕನು ತಕ್ಷಣ ಆ ಕೈಯನ್ನು ಮುಂದಕ್ಕೆ ಎತ್ತಿ ಹಿಡಿದು ವಿನಮ್ರನಂತೆ ಹೇಳಿದ; “ಕ್ಷಮಿಸಿ, ನಿಮ್ಮ ರಾಡ್ ಕೆಳಗೆ ಬಿದ್ದಿತ್ತು”. ಅವರ ಪೈಕಿ ಒಬ್ಬನು ಪಕ್ಕನೆ ಅವನ ಕೈಯಿಂದ ರಾಡ್ ಕಸಿದುಕೊಂಡ, ಮತ್ತು ಮೂವರೂ ತಮ್ಮ ವಾಹನದ ಕಡೆಗೆ ತಿರುಗಿ ನಡೆದರು. ಯುವಕ ಅವರೆಡೆಗೆ ಕೈ ಅಲುಗಾಡಿಸುತ್ತಾ ಅಲ್‌ವಿದಾ ಹೇಳುತ್ತಾ ನಿಂತುಕೊಂಡಿದ್ದ.

**ಉಪಸಂಹಾರ**

**ಕಿಡಿ + ಕಿಡಿ = ಸ್ಫೋಟ**

1. ಈ ವರದಿ ನಮಗೆ ಲಭಿಸಿಲ್ಲ
2. ಸಹೀಹ್ ಬುಖಾರಿ 6114, ಸಹೀಹ್ ಮುಸ್ಲಿಮ್ 2609
3. ಸುನನು ಅಬೂದಾವೂದ್ 3589, ಸುನನು ಇಬ್ನ್‌ಮಾಜ 2316,
   ಜಾಮಿಅ್‌ತಿರ್ಮುದಿ 1334
4. ಶುಅಬುಲ್ ಈಮಾನ್ ಬೈಹಕಿ 7/398

# ಖಾಸಗಿ ವಿಚಾರಗಳ ಕುರಿತು ಪರಿಗಣನೆ

ಮನುಷ್ಯನಿಗೆ ಜೀವನದಲ್ಲಿ ವಿಭಿನ್ನ ರೀತಿಯ ಸನ್ನಿವೇಶಗಳು ಸಂಜಾತವಾಗುತ್ತಿರುತ್ತದೆ. ಸುಖ–ಸಂತೋಷ, ದುಃಖ–ದುಮ್ಮಾನ, ಆರೋಗ್ಯ–ಅನಾರೋಗ್ಯ, ಬಡತನ – ಸಿರಿತನ, ಸ್ಥಿರತೆ – ಅಸ್ಥಿರತೆಗಳೆಂಬ ಏರುಪೇರುಗಳು ಮನುಷ್ಯ ಜೀವನದ ಅವಿಭಾಜ್ಯ ಅಂಗಗಳಾಗಿವೆ. ಮನುಷ್ಯ ಸ್ವಭಾವದಲ್ಲಿ ಕಂಡುಬರುವ ವೈಪರೀತ್ಯಗಳೂ ಪ್ರಕೃತಿಯ ಅನಿಷೇದ್ಯ ವಾಸ್ತವಿಕತೆಗಳಾಗಿವೆ. ಜೀವನದಲ್ಲಿ ಎದುರಾಗುವ ಎಡರು ತೊಡರುಗಳನ್ನು ಜನರು ಅವರವರ ಬುದ್ಧಿ, ಸಾಮರ್ಥ್ಯಗಳನ್ನು ಅನುಸರಿಸಿಕೊಂಡು ಎದುರಿಸುತ್ತಾರೆ. ಜೀವನದಲ್ಲಿ ವಿಭಿನ್ನ ರೀತಿಯ ಜನರೊಂದಿಗೆ ವ್ಯವಹರಿಸಬೇಕಾದ ಸಂದರ್ಭಗಳು ಎದುರಾಗುತ್ತದೆ. ಅಂತಹಾ ಸಂದರ್ಭದಲ್ಲಿ ಜನರ ಅಭಿರುಚಿ ಮತ್ತು ವ್ಯಕ್ತಿತ್ವವನ್ನು ಮತ್ತು ಅವರ ಖಾಸಗಿ ವಿಚಾರಗಳನ್ನು ಪರಿಗಣಿಸಬೇಕಾಗಿದ್ದು ಅತ್ಯಾವಶ್ಯಕವಾಗಿದೆ.

ಉದಾಹರಣೆಗೆ ಒಂದು ತಂದೆ–ತಾಯಿ ಇಲ್ಲದ ಸ್ತ್ರೀಗೆ ಅವಳ ಪತಿ ತಲಾಕ್ ಕೊಡುತ್ತಾನೆ. ಅವಳು ನಂತರ ತನ್ನ ಸಹೋದರನೊಂದಿಗೆ ಅವನ ಮನೆಯಲ್ಲಿ ನೆಲೆಸುವ ತೀರ್ಮಾಣ ಮಾಡುತ್ತಾಳೆ. ಬೆಳಿಗ್ಗೆ ಮತ್ತು ಸಂಜೆ ಅವಳ ನೆರೆ ಮನೆಯವಳು ಅವಳನ್ನು ಕಾಣಲು ಬರುತ್ತಾಳೆ. ಆ ಸ್ತ್ರೀ ಅವಳನ್ನು ದಿನಾ ಸ್ವಾಗತಿಸುತ್ತಾಳೆ ಮತ್ತು ಚಾ ಕಾಫಿ ಮಾಡಿಕೊಡುತ್ತಾಳೆ. ನೆರೆಮನೆಯವಳು ಈ ಸ್ತ್ರೀಯೊಂದಿಗೆ ಯಾವ ವಿಷಯವನ್ನು ಪ್ರಸ್ತಾಪಿಸಲಿ ಎಂದು ಆಲೋಚಿಸುತ್ತಿರುತ್ತಾಳೆ. ತಲಾಕ್ ಆದ ಸ್ತ್ರೀ ಅವಳೊಂದಿಗೆ ಕೇಳುತ್ತಾಳೆ. "ನಿನ್ನೆ ನೀವು ಕುಟುಂಬ ಸಮೇತ ಎಲ್ಲೊ ಹೋಗುವುದನ್ನು ನೋಡಿದೆ?"

ನೆರೆಯವಳು ಹೇಳಿದಳು; "ರಾತ್ರಿಯ ಊಟವನ್ನು ಹೊರಗೆ ಮಾಡೋಣವೆಂದು ಅವರು, (ಪತಿ) ಬಯಸಿದರು. ಹಾಗೆ ಅವರು ನನ್ನನ್ನು ಹೊರಗೆ ಕರೆದೊಯ್ದರು. ಹಾಗೆ ದಾರಿಯಲ್ಲಿ ಹೋಗುತ್ತಿರುವಾಗ ತಂಗಿಯ ಮದುವೆಯಲ್ಲಿ ಧರಿಸುವುದಕ್ಕಾಗಿ ಒಂದು ಗೌನ್ ಖರೀದಿಸಿದೆವು. ಬಳಿಕ ಜ್ಯುವೆಲ್ಲರಿಗೆ ಹೋಗಿ ಎರಡು ಚಿನ್ನದ ಬಳೆಗಳನ್ನು ಪಡೆದೆವು. ತೌಬಾ! ವಿಪರೀತ ಖರ್ಚು. ಮನೆ ತಲುಪಿದರೆ ಮಕ್ಕಳು ಬಾಯಿ ತೆರೆದು ಕುಳಿತುಕೊಂಡಿದ್ದರು. ಬಳಿಕ ನಿಮ್ಮನ್ನು ವಾರದ ಅಂತ್ಯದಲ್ಲಿ ಎಲ್ಲಾದರೂ (ತಿರುಗಲು) ಕರೆದುಕೊಂಡು ಹೋಗುತ್ತೇನೆಂದು ಹೇಳಿ ಅವರು ಮಕ್ಕಳನ್ನು ಸಮಾಧಾನ ಪಡಿಸಿದರು."

ವಿಚ್ಛೇದಿತ ಮಹಿಳೆ ಈ ಮಹಿಳೆಯ ಕತೆ ಕೇಳುತ್ತಾ ತನ್ನ ಧೈನ್ಯಾವಸ್ಥೆಯ ಬಗ್ಗೆ ಕೊರಗುತ್ತಾ ಇದ್ದಳು.

ಇಲ್ಲಿ ಹುಟ್ಟಿಕೊಳ್ಳುವ ಪ್ರಶ್ನೆ ಏನೆಂದರೆ, ಇಂತಹಾ ಅಸಹಾಯಕ ಹೆಣ್ಣಿನ ಮುಂದೆ ಈ ವಿಷಯವನ್ನೆಲ್ಲಾ ಪ್ರಸ್ತಾಪಿಸುವ ಅವಶ್ಯಕತೆ ಇದೆಯೇ? ಇದರಿಂದ ಅವಳಿಗೆ ತನ್ನ ನೆರೆಯವಳ ಕುರಿತು ಎಂತಹಾ ಅಭಿಪ್ರಾಯ ಉಂಟಾಗಬಹುದು? ಅವಳಿಗೆ ನೆರೆಯವಳ ಸಂಪರ್ಕದಿಂದ ಮಾನಸಿಕವಾಗಿ ಏನಾದರೂ ಸಮಾಧಾನ ಲಭಿಸಬಹುದೇ..?

ನೀವೇನೆನ್ನುತ್ತೀರಿ? ಇದಕ್ಕೆ ಉತ್ತರ ಖಂಡಿತವಾಗಿಯೂ ನಕಾರಾತ್ಮಕವಾಗಿ ಇರುವುದು,

ಈ ಸಮಸ್ಯೆಯ ಪರಿಹಾರವೇನು? ನೆರೆಯವಳು ಈ ಅಸಹಾಯಕ ಹೆಣ್ಣಿನೊಂದಿಗೆ ಸುಳ್ಳು ಹೇಳುವುದೇ...? ಅಲ್ಲ ಖಂಡಿತ ಅಲ್ಲ. ಬದಲಾಗಿ ಪ್ರಶ್ನೆಗೆ ಸಂಕ್ಷಿಪ್ತವಾದ ಉತ್ತರ ಕೊಟ್ಟು ವಿಷಯ ಬದಲಿಸಬಹುದಾಗಿತ್ತು. ಉದಾಹರಣೆಗೆ "ಹ್ಞಾಂ. ಒಂದು ಅತ್ಯಾವಶ್ಯಕ ಕಾರ್ಯಕ್ಕಾಗಿ ಹೊರಗೆ ಹೋಗಿದ್ದೆವು" ಎಂದು ಹೇಳಿ ಆ ವಿಚ್ಛೇದಿತ ಮಹಿಳೆಗೆ ಸಹತಾಪಕರ ಮಾತನ್ನು ಪ್ರಸ್ತಾಪಿಸಬಹುದಿತ್ತು.

ಇನ್ನೊಂದು ವಿಷಯದ ಕುರಿತು ಪರಾಮರ್ಶಿಸಿ ನೋಡೋಣ, ಇಬ್ಬರು ಸ್ನೇಹಿತರು ಒಟ್ಟಿಗೆ ಸೆಕೆಂಡರಿ ಪರೀಕ್ಷೆಗೆ ಕುಳಿತುಕೊಳ್ಳುತ್ತಾರೆ. ಅವರಲ್ಲಿ ಒಬ್ಬನು ಗರಿಷ್ಠ ಅಂಕಗಳನ್ನು ಗಳಿಸಿ ತೇರ್ಗಡೆ ಹೊಂದುತ್ತಾನೆ. ಇನ್ನೊಬ್ಬ ಒಂದೆರಡು ವಿಷಯುಗಳಲ್ಲಿ ಅನುತ್ತೀರ್ಣನಾಗುತ್ತಾನೆ. ಇದರಿಂದ ಅವನು ತನ್ನ ಶಿಕ್ಷಣವನ್ನು ಮುಂದುವರಿಸಲು ಸಾಧ್ಯವಾಗುವುದಿಲ್ಲ. ಇಂತಹ ಸಂದರ್ಭದಲ್ಲಿ ಪಾಸ್ ಆದವನ್ನು ತನ್ನ ಫೇಲ್ ಆದ ಸ್ನೇಹಿತನನ್ನು ಸಂಧಿಸಿದಾಗ ತನ್ನ ಶೈಕ್ಷಣಿಕ ಅಭಿಯಾನದ ಕುರಿತು, ಯುನಿವರ್ಸಿಟಿ ಪರೀಕ್ಷೆಗಳ ಕುರಿತು ಪ್ರಸ್ತಾಪಿಸುವುದನ್ನು ನೀವು ಸರಿ ಎನ್ನುವುರಾ...? ಏಕೆಂದರೆ ಅವನ ಆ ಮಿತ್ರ ಈಗಾಗಲೇ ಆ ನಿಟ್ಟಿನ ಪ್ರಯತ್ನದಲ್ಲಿ ವಿಫಲವಾಗಿ ಹತಾಶನಾಗಿದ್ದಾನೆ. ಖಂಡಿತವಾಗಿಯೂ ಅದು ಸಮಂಜಸವೆಂದು ನೀವು ಹೇಳಲಾರಿರಿ. ಹಾಗಾದರೆ ತನ್ನ ಅನುತ್ತೀರ್ಣನಾದ ಸಹಪಾಠಿಯೊಂದಿಗೆ ಅವನು ಯಾವ ವಿಷಯವನ್ನು ಪ್ರಸ್ತಾಪಿಸಬೇಕು?

ನನ್ನ ಅಭಿಪ್ರಾಯದಂತೆ ಅವನು ಈ ಕ್ಷೇತ್ರದಲ್ಲಿ ಸಾರ್ವತ್ರಿಕವಾಗಿರುವ ವಿಷಯವನ್ನು ಅಲ್ಲಿ ಪ್ರಸ್ತಾಪಿಸಿದರೆ ಮಿತ್ರನ ಹೃದಯ ಬೇಗುದಿಯನ್ನು ಶಮನಗೊಳಿಸಿದಂತೆ ಆಗಬಹುದು. ಉದಾಹರಣೆಗೆ ಪದವಿ ಕಾಲೇಜುಗಳಲ್ಲಿ ಮತ್ತು ವೃತ್ತಿಪರ ಶಿಕ್ಷಣ ಕ್ಷೇತ್ರಗಳಲ್ಲಿ ವ್ಯಾಪಾರಿ ಮನೋಭಾವ ತುಂಬಿ ತುಳುಕುತ್ತಿದೆ. ಹೆಸರಾಂತ ವಿದ್ಯಾ ಸಂಸ್ಥೆಗಳ ಬಳಿ ಹೋಗುವುದು ಕೂಡಾ ನಮ್ಮಂತಹವರಿಗೆ ಸಾಧ್ಯವಿಲ್ಲ. ಶಿಕ್ಷಣ ಅಷ್ಟೊಂದು ದುಬಾರಿಯಾಗಿ ಬಿಟ್ಟಿದೆ. ವಿದ್ಯಾರ್ಥಿಗಳು ದಾಖಲಾತಿಗಾಗಿ ಅಲೆದಾಡುವಂತಹಾ ಸ್ಥಿತಿ ಇದೆ... ಹೀಗೆ ಮಾತು ಪ್ರಾರಂಭಿಸಿದರೆ ಮಿತ್ರನ ಮನಸ್ಸು ಹಗುರವಾಗಬಹುದು. ಅವನು ತನ್ನ ಮಿತ್ರನನ್ನು ಸಂಧಿಸುವುದು, ಮಾತಾಡುವುದನ್ನು ಇಷ್ಟಪಡಬಹುದು. ಅವನು ಮಿತ್ರನಿಗೆ ಇನ್ನಷ್ಟು ಆಪ್ತನಾಗಬಹುದು.

ಬಹುಷ ಅಲ್ಲಾಹನ ಸಂದೇಶವಾಹಕರು ಕೂಡಾ ಜನರೊಂದಿಗೆ ವ್ಯವಹರಿಸುವಾಗ ಅವರ ಸ್ಥಿತಿ – ಗತಿ ಮತ್ತು ಪರಿಸ್ಥಿತಿಯನ್ನು ಪರಿಗಣಿಸಲು ಆದೇಶಿಸಿದ್ದಾರೆ. ಅವರು ಹೇಳಿದರು

«لَا تُدِيمُوا النَّظَرَ إِلَى الْمَجْذُومِينَ»

**ಕುಷ್ಠ ರೋಗಿಗಳನ್ನು ದುರುಗುಟ್ಟಿ ನೋಡಬೇಡಿರಿ**

ಕುಷ್ಠವು ಅತ್ಯಂತ ಕೆಟ್ಟದಾದ ಒಂದು ರೋಗವಾಗಿದೆ. ಇದು ತಗಲಿದವನ ಚರ್ಮವು

ಕರಟಿ ಹೋಗುತ್ತದೆ ಮತ್ತು ನೋಡಲು ಬಹಳ ಹೊಲಸಾಗಿ ಕಾಣುತ್ತದೆ. ಅಂತಹ ರೋಗಿಗಳೇನಾದರೂ ಜನರ ನಡುವೆ ಬಂದರೆ ಜನರು ಅವರನ್ನು ಕೆಟ್ಟದಾದ ದೃಷ್ಠಿಯಲ್ಲಿ ಕಾಣುತ್ತಾರೆ. ದುರುಗುಟ್ಟಿ ನೋಡುತ್ತಾರೆ. ಇದರಿಂದ ಆ ರೋಗಿಯ ಹೃದಯವು ಕ್ಲೇಷಗೊಳ್ಳುತ್ತದೆ. ಅವನು ದುಃಖ ತೃಪ್ತನಾಗಿ ಬಿಡುವುದು ಸಹಜ

ಒಮ್ಮೆ ಪ್ರವಾದಿ ಮುಹಮ್ಮದ್(ಸ)ರವರು ಅಬೂಬಕರ್ ಸಿದ್ದೀಕ್(ರ)ರವರ ತಂದೆ ಅಬೂಕುಹಾಫರೊಂದಿಗೆ ಅತ್ಯಂತ ಹೃದಯಂಗಮವಾಗಿ ನಡೆದುಕೊಂಡರು. ಆ ಘಟನೆಯನ್ನು ಸ್ವಲ್ಪ ಪರಿಶೀಲಿಸೋಣ. ಪ್ರವಾದಿ ವರ್ಯರು(ಸ) ತನ್ನ ಸಹಪಾಠಿಗಳೊಂದಿಗೆ ಮಕ್ಕಾಫತ್‌ಹ್‌ಗಾಗಿ ಬಂದರು. ಅಬೂಬಕರ್(ರ)ರವರ ತಂದೆ ಆಗ ಅತ್ಯಂತ ವೃದ್ಧರೂ, ಕುರುಡರೂ ಆಗಿದ್ದರು. ಅವರು ತನ್ನ ಪುತ್ರಿಯೊಂದಿಗೆ ಹೇಳಿದರು; "ನನ್ನನ್ನು ಸ್ವಲ್ಪ ಅಬೂ ಕುಬೈಸ್ ಪರ್ವತದ ತುದಿಗೆ ಕರೆದುಕೊಂಡು ಹೋಗು. ಜನರು ಮುಹಮ್ಮದ್(ಸ) ಬರುತ್ತಿದ್ದಾರೆಂದು ಹೇಳುತ್ತಿದ್ದಾರೆ. ನಾನು ಸ್ವಲ್ಪ ನೋಡುತ್ತೇನೆ". ಬಾಲಕಿ ಅವರನ್ನು ಜೊತೆಗೆ ಕರೆದುಕೊಂಡು ಗುಡ್ಡವನ್ನು ಹತ್ತಿದಳು. ಅಬೂಕುಹಾಫ ಕೇಳಿದರು; "ಮಗಳೇ! ನಿನಗೇನು ಕಾಣುತ್ತಿದೆ? ಅವಳು ಹೇಳಿದಳು; ಪಿತೃವರ್ಯರೇ! ನಾನೊಂದು ದೊಡ್ಡ ಸೈನ್ಯವನ್ನು ನೋಡುತ್ತಿದ್ದೇನೆ. ಅವರು ಕವಾಯತು ನಡೆಸುತ್ತಿದ್ದಾರೆ" ಬಾಲಕಿ ಹೇಳಿದಳು; "ಎಲ್ಲರಿಗಿಂತ ಮುಂದೆ ಒಬ್ಬ ವ್ಯಕ್ತಿ ಇದ್ದಾರೆ. ಅವರು ಅತ್ತ–ಇತ್ತ ಓಡಾಡುತ್ತಿದ್ದಾರೆ" ಅಬೂಕುಹಾಫ ಹೇಳಿದರು; "ಮಗಳೇ ಅದು ಅವರ ಕಮಾಂಡರ್ ಆಗಿರುತ್ತಾರೆ. ಅವನು ತನ್ನ ಸೈನ್ಯಕ್ಕೆ ಮಾರ್ಗದರ್ಶನ ನೀಡುತ್ತಾನೆ" ಬಾಲಕಿ ಹೇಳಿದಳು; "ಪಿತೃ ವರ್ಯರೇ! ಅಲ್ಲಾಹನಾಣೆ! ಸೈನ್ಯವು ಚದುರಿತು" ಅವರು ಗಾಬರಿಯಿಂದ ಹೇಳಿದರು; "ನನ್ನನ್ನು ತಕ್ಷಣ ಮನೆಗೆ ಕರೆದುಕೊಂಡು ಹೋಗು ಅವರವರ ಮನೆಯಲ್ಲಿ ಬಾಗಿಲು ಹಾಕಿ ಕುಳಿತುಕೊಂಡವರಿಗೆ ರಕ್ಷೆ ಇದೆ ಎಂದು ಜನರು ಹೇಳುತ್ತಿದ್ದಾರೆ.

ಬಾಲಕಿ ಅಬೂಕುಹಾಫರನ್ನು ಕರೆದುಕೊಂಡು ವೇಗವಾಗಿ ಬೆಟ್ಟವನ್ನು ಇಳಿದಳು. ಆದರೆ ಅವರು ಮನೆ ತಲುಪುವ ಮೊದಲೇ ಮುಸಲ್ಮಾನರ ಸೈನ್ಯವು ಅವರ ಎದುರಾಯಿತು. ಅಬೂಬಕರ್(ರ) ತನ್ನ ತಂದೆಯ ಬಳಿಗೆ ಹೋದರು. ಅವರ ಕೈ ಹಿಡಿದು ಮಸೀದಿಗೆ ಪ್ರವಾದಿ(ಸ)ರವರ ಬಳಿಗೆ ಕರೆದೊಯ್ದರು.

ಪ್ರವಾದಿ(ಸ) ಅಬೂಕುಹಾಫ ಬಹಳ ವೃದ್ಧರಾಗಿರುವುದನ್ನು ಕಂಡರು. ಅವರ ಮುಖದ ಚರ್ಮವು ಮುರುಟಿ ಹೋಗಿತ್ತು. ಎಲುಬುಗಳು ದುರ್ಬಲಗೊಂಡಿತ್ತು ಇನ್ನೇನು ನಾಲ್ಕು ದಿನದ ನೆಂಟರು ಎಂಬಂತೆ ಕಂಡುಬರುತ್ತಿದ್ದರು. ಇನ್ನೊಂದು ಕಡೆ ಅಬೂಬಕರ್(ರ)ರವರು ಬಹಳ ಪ್ರೀತಿಯ ದೃಷ್ಠಿಯಿಂದ ತನ್ನ ತಂದೆಯವರನ್ನು ನೋಡುತ್ತಿದ್ದರು. ಅವರು ಬಹಳ ವರ್ಷ ಮೊದಲು ತಂದೆಯವರಿಗೆ ವಿಧಾಯ ಹೇಳಿ ಧರ್ಮದ ಸೇವೆಯಲ್ಲಿ ನಿರತರಾಗಿದ್ದರು. ಪ್ರವಾದಿ(ಸ) ಅಬೂಬಕರ್(ರ)ರವರನ್ನು ನೋಡಿದರು. ಅವರ ಹೃದಯದ ಭಾವನೆ ಮತ್ತು ಅವರ ಉನ್ನತ ಸ್ಥಾನಮಾನವನ್ನು ಅರ್ಥೈಸಿಕೊಂಡು ಹೇಳಿದರು "ನೀವು ಈ ಹಿರಿಯರನ್ನುಅವರ ಮನೆಯಲ್ಲೇ ಬಿಡಬೇಕಿತ್ತು. ನಾನು ಅಲ್ಲೇ ಹೋಗಿ ಅವರನ್ನು ಕಂಡು ಬರುತ್ತಿದ್ದೆ."

ಅಬೂಬಕರ್(ರ)ರವರಿಗೆ ಮುಸಲ್ಮಾನರು ಯುದ್ಧವನ್ನೂ ಎದುರಿಸುತ್ತಿದ್ದಾರೆಂದು

ಚೆನ್ನಾಗಿ ತಿಳಿದಿತ್ತು. ಪ್ರವಾದಿ(ಸ) ಸಂಪೂರ್ಣ ಸೈನ್ಯದ ಕಮಾಂಡರ್ ಆಗಿದ್ದಾರೆ. ಅವರ ಬಳಿ ಸಮಯಾವಕಾಶವು ಕಡಿಮೆ ಮತ್ತು ಕೆಲಸವು ಹೆಚ್ಚಿದೆ. ಆದ್ದರಿಂದ ಪ್ರವಾದಿ(ಸ)ರವರಿಗೆ ಅವರ ಮನೆ ತನಕ ಹೋಗುವ ಮತ್ತೊಂದು ಕೆಲಸ ಕೊಡುವುದು ಸರಿಯಲ್ಲ. ಅಬೂಬಕರ್(ರ) ಹೇಳಿದರು; "ನೀವು ಇವರ ಬಳಿ ನಡೆದುಕೊಂಡು ಹೋಗುವ ಅವಶ್ಯಕತೆ ಏನಿದೆ? ಇಲ್ಲಿಗೆ ಬಂದು ನಿಮ್ಮನ್ನು ಕಾಣುವುದು ಅವರ ಕರ್ತವ್ಯವಾಗಿದೆ." ಪ್ರವಾದಿ(ಸ) ಅಬೂಕುಹಾಫ ರನ್ನು ತನ್ನ ಎದುರು ಕುಳ್ಳಿರಿಸಿಕೊಂಡರು. ಅವರ ಎದೆಯ ಮೇಲೆ ಕೈ ಇಟ್ಟುಕೊಂಡು ಹೇಳಿದರು; "ಇಸ್ಲಾಮ್ ಸ್ವೀಕರಿಸಿರಿ".

ಅಬೂಕುಹಾಫ ರವರ ಮುಖವು ಒಮ್ಮೆಗೇ ಪ್ರಶೋಭಿಸಿತು. ತಕ್ಷಣ ಅವರು ಹೇಳಿದರು; "ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯ ವಹಿಸುತ್ತೇನೆ. ಮುಹಮ್ಮದ್(ಸ) ಅಲ್ಲಾಹನ ದಾಸರೂ ಸಂದೇಶ ವಾಹಕರೂ ಆಗಿರುವರೆಂದು ನಾನು ಸಾಕ್ಷ್ಯವಹಿಸುತ್ತೇನೆ".

ಅಬೂಬಕರ್(ರ) ರವರಿಗೆ ತನ್ನ ಪಿತೃವರ್ಯರ ಇಸ್ಲಾಮ್ ಸ್ವೀಕಾರದಿಂದ ಅಪಾರ ಸಂತೋಷವಾಯಿತು. ಅವರ ಹರ್ಷೋಲ್ಲಾಸಕ್ಕೆ ಸೀಮೆಯೇ ಇರಲಿಲ್ಲ. ತದ ನಂತರ ಅಲ್ಲಾಹನ ಸಂದೇಶವಾಹಕರು ವೃದ್ಧ ಅಬೂಕುಹಾಫರವರ ತಲೆ ಮತ್ತು ದಾಡಿಯ ಬೆಳ್ಳಗಿನ ಕೂದಲನ್ನು ನೋಡುತ್ತಾ ಸಹಾಬಿಗಳೊಂದಿಗೆ ಹೇಳಿದರು; "ಈ ಕೂದಲಿನ ಬಣ್ಣ ಬದಲಿಸಿ ಆದರೆ ಕಪ್ಪು ಬಣ್ಣ ಹಚ್ಚಬೇಡಿರಿ" ಹೌದು! ಪ್ರವಾದಿ ವರ್ಯರು(ಸ) ಜನರೊಂದಿಗೆ ವ್ಯವಹರಿಸುವಾಗ ಅವರ ಸ್ಥಿತಿಗತಿಗಳನ್ನು ಸ್ಥಾನ – ಮಾನಗಳನ್ನು ಪರಿಗಣಿಸುತ್ತಿದ್ದರು.

ಅಂದು ಪ್ರವಾದಿ(ಸ) ತನ್ನ ಸೈನ್ಯದೊಂದಿಗೆ ಮಕ್ಕಾ ಪ್ರವೇಶಿಸಿ ತನ್ನ ಸೈನ್ಯವನ್ನು ಕೆಲವು ವಿಭಾಗಗಳಾಗಿ ವಿಂಗಡಿಸಿದರು. ಅನ್ಸಾರಿ ವಿಭಾಗದಲ್ಲಿ ಧ್ವಜ ವಾಹಕರಾಗಿ ಅನ್ಸಾರಿಗಳಲ್ಲಿ ಪ್ರಮುಖರಾದ ಸಹಾಬಿ ಸಅದ್ ಬಿನ್ ಉಬಾದ(ರ)ರವರನ್ನು ನೇಮಿಸಿದರು. ಬಾವುಟ ಎತ್ತುವವರಿಗೆ ಅದೊಂದು ಗೌರವದ ಸಂಕೇತವಾಗಿರುತ್ತದೆ. ಸಅದ್(ರ) ಮಕ್ಕಾದವರ ಕಡೆಗೆ ದೃಷ್ಠಿ ಬೀರುವಾಗ ಅವರಿಗೆ ಪ್ರವಾದಿ(ಸ) ರವರ ವಿರುದ್ಧ ಸಮರ ಘೋಷಿಸಿದ್ದ ಜನರೇ ಕಂಡುಬಂದರು. ನೆಬಿವರ್ಯರನ್ನು (ಸ) ಮಕ್ಕಾದ ಭೂಮಿಯಿಂದ ಪಲಾಯನ ಮಾಡಲು ಅವರು ನಿರ್ಬಂಧಿಸಿದ್ದರು. ಜನರು ಅವರನ್ನು ಸಮೀಪಿಸದಂತೆ ಬಲವಂತವಾಗಿ ತಡೆಯುತ್ತಿದ್ದರು. ಸುಮಯ್ಯ(ರ) ಮತ್ತು ಯಾಸರ್(ರ) ರವರನ್ನು ನಿರ್ಧಯವಾಗಿ ಅವರು ವಧಿಸಿದ್ದರು. ಬಿಲಾಲ್ ಮತ್ತು ಖಬಾಬ್(ರ)ರವರಿಗೆ ವಿಪರೀತ ಹಿಂಸೆ ನೀಡಿದ್ದರು. ಅವರ ದೃಷ್ಠಿಯಲ್ಲಿ ಅವರೆಲ್ಲರೂ ಪ್ರತೀಕಾರಕ್ಕೆ ಅತ್ಯಂತ ಅರ್ಹರೇ ಆಗಿದ್ದರು. ಸಅದ್(ರ) ಧ್ವಜ ಎತ್ತಿಕೊಳ್ಳುತ್ತಾ ಹೇಳಿದರು;

اَلْيَوْمَ يَوْمُ الْمَلْحَمَهْ

اَلْيَوْمَ تُسْتَحَلُّ الْحُرْمَهْ

**"ಇಂದು ರಕ್ತಹರಿಸುವ ಪ್ರತೀಕಾರದ ದಿನವಾಗಿದೆ. ಇಂದು ನಿಷೇಧಿತ ಕಾರ್ಯವನ್ನು ಧರ್ಮಬದ್ಧಗೊಳಿಸಲಾಗುವುದು"**

ಸಅದ್(ರ)ರವರ ಈ ಮಾತು ಕುರೈಷರಲ್ಲಿ ವಿದ್ಯುತ್ ಸಂಚಲನ ಉಂಟು ಮಾಡಿತು. ಸಅದ್(ರ) ಕುರೈಷರನ್ನು ನಾಶಮಾಡಿ ಬಿಡುವರೇ ಎಂದು ಅವರಿಗೆ ತೋರಿತು. ಕುರೈಷರ ಒಂದು ಸ್ತ್ರೀ ಪ್ರವಾದಿ(ಸ)ರನ್ನು ರಸ್ತೆಯಲ್ಲಿ ತಡೆದರು. ಮತ್ತು ಸಅದರ(ರ) ವಿಚಾರವಾಗಿ ಹೇಳಿದರು;

يَا نَبِيّ الْهُدٰى إِلَيْكَ لَجَا حَيُّ قُرَيْشٍ وَّلَاتَ حِينَ لَجَاءِ

حِينَ ضَاقَتْ عَلَيْهِمُ سَعَةُ الْأَرْضِ وَعَادَاهُمُ إِلٰهُ السَّمَاءِ

**"ಹೇ ಸನ್ಮಾರ್ಗದ ದೂತರೇ! ಕುರೈಷರು ನಿಮ್ಮ ಸಹಾಯಕ್ಕಾಗಿ ಅಭ್ಯರ್ಥಿಸಿಕೊಳ್ಳುತ್ತಾರೆ. ವಾಸ್ತವದಲ್ಲಿ ಇದು ಸಹಾಯ ಅಪೇಕ್ಷಿಸುವ ಸಮಯವಲ್ಲ ಭೂಮಿ ವಿಶಾಲವಾಗಿದ್ದರೂ ಈಗ ಅವರಿಗೆ ಸಂಕೀರ್ಣವಾಗಿ ತೋರುತ್ತಿದೆ. ಆಕಾಶದ ಒಡೆಯನು ಅವರ ಕುರಿತು ಕ್ರೋಧಗೊಂಡಿದ್ದಾನೆ"**

إِنَّ سَعْداً يُّرِيدُ قَاصِمَةَ الظَّهْرِ بِأَهْلِ الْحَجُونِ وَالْبَطْحَاءِ

خَزْرَجِيٌّ لَوْ يَستَطِيعُ مِنَ الْغَيْظِ رَمَانَا بِالنَّسْرِ وَالْعَوَّاءِ

**"ಸಅದ್ ಹಜೂನ್‌ನ ನಿವಾಸಿಗಳು ಮತ್ತು ಬತಾಅ್‌ನ ಪ್ರಜೆಗಳ ಮೇಲೆ ಉಗ್ರದಾಳಿ ನಡೆಸ ಬಯಸುತ್ತಾರೆ. ಖಝ್ರುಜ್‌ನ ಆ ಯೋಧ ಎಷ್ಟು ಕೋಪಗೊಂಡಿರುವರೆಂದರೆ ಅವರನ್ನು ತಡೆಯದಿದ್ದರೆ ಅವರು ನಮ್ಮ ಮೇಲೆ ಬಿಲ್ಲು ಬಾಣಗಳ ಸುರಿಮಳೆ ಮಾಡಿಬಿಡುವರು."**

فَانْهَيَنَّهُ فَإِنَّهُ الْأَسَدُ الْأَسْوَدُ وَاللَّيْثُ وَالِغٌ فِي الدِّمَاءِ

فَلَئِنْ أَقْحَمَ اللِّوَاءَ وَنَادَى يَا حُمَاةَ اللِّوَاءِ أَهْلَ اللِّوَاءِ

**"ತಾವು ಅವರನ್ನು ತಡೆಯಿರಿ.. ಅವರು ಸಅದ್ ಆಗಿದ್ದಾರೆ. ಅಂದರೆ ಹುಲಿ, ಕೇಸರಿ ಹುಲಿ ಅದರ ಬಾಯಿ ರಕ್ತದಿಂದ ಒದ್ದೆಯಾಗಿದೆ. ಒಂದು ವೇಳೆ ಅವರು ಧ್ವಜ ಎತ್ತಿಕೊಂಡು ನಮ್ಮ ಮೇಲೆ ನೆಗೆದರೆ, ಅವರ ಸಹವರ್ತಿಗಳನ್ನು ಕರೆದುಕೊಂಡರೆ."**

لَتَكُونَنَّ بِالْبِطَاحِ قُرَيْشٌ بُقْعَةَ الْقَاعِ فِي أَكُفِّ الْإِمَاءِ

إِنَّهُ مُصْلِتٌ يُرِيدُ لَهَا الرَّأْيَ صَمُوتٌ كَالْحَيَّةِ الصَّمَّاءِ

**"ಬತಾಅ್‌ನ ಕಣಿವೆಯಲ್ಲಿ ಕುರೈಷರ ಅವಸ್ಥೆಯು ಹುಡುಗಿಯರ ಕೈ ವಶವಾದ ಭೂಮಿಯ ಆ ತುಂಡಿನಂತಾಗುವುದು. ಅವರು ಖಡ್ಗವನ್ನು ಝಳಪಿಸುತ್ತಾ ಕುರೈಷರನ್ನು ವಧಿಸಲು ಸಿದ್ಧರಾಗಿ ನಿಂತಿದ್ದಾರೆ. ಅವರು ಮೂಕ ಹಾವಿನಂತೆ ಹೆಡೆ ಎತ್ತಿ ನಿಂತಿದ್ದಾರೆ."**

ಅಲ್ಲಾಹ್‌ನ ಸಂದೇಶ ವಾಹಕರಿಗೆ (ಸ) ಈ ಕಾವ್ಯವನ್ನು ಕೇಳಿ ಕುರೈಷರ ಮೇಲೆ

ಕರುಣೆ ಉಕ್ಕಿತು. ಅವರು ಆ ಅಸಹಾಯಕ ಸ್ತ್ರೀಯನ್ನು ಮತ್ತಷ್ಟು ನಿರಾಶೆಗೊಳಿಸಲು ಬಯಸಲಿಲ್ಲ. ಸಅದ್(ರ)ರಿಂದ ಧ್ವಜವನ್ನು ಮರಳಿ ಪಡೆದು ಅವರು ಸಅದ್‌ರನ್ನು ಬೇಸರಗೊಳಿಸಲೂ ಇಷ್ಟಪಡಲಿಲ್ಲ. ಆದ್ದರಿಂದ ಅವರು ಸಅದ್(ರ)ರಿಗೆ ಧ್ವಜವನ್ನು ಅವರ ಪುತ್ರ ಕೈಸ್ ಬಿನ್ ಸಅದ್ ರವರಿಗೆ ವರ್ಗಾಯಿಸುವಂತೆ ಸೂಚಿಸಿದರು. ಕೈಸ್ ಧ್ವಜ ಹಿಡಿದುಕೊಂಡು ಮಕ್ಕಾದೊಳಗೆ ಪ್ರವೇಶಿಸಿದರು. ಅವರ ತಂದೆ ಸಅದ್ ಹೆಗಲಿಗೆ ಹೆಗಲು ಕೊಟ್ಟು ಅವರೊಂದಿಗೆ ಸಹಕರಿಸುತ್ತಿದ್ದರು. ಆ ಸ್ತ್ರೀ ಮತ್ತು ಕುರೈಷರು ಸಅದ್‌ರವರ ಕೈಯಲ್ಲಿ ಧ್ವಜವಿಲ್ಲದ್ದನ್ನು ಕಂಡು ಸಮಾಧಾನಗೊಂಡರು. ಸಅದ್(ರ) ಕೂಡಾ ಬೇಸರಗೊಳ್ಳಲಿಲ್ಲ. ನನ್ನಿಂದ ಧ್ವಜವನ್ನು ಕಸಿದುಕೊಳ್ಳಲಾಗಿದೆ ಎಂಬ ಭಾವನೆ ಅವರ ಮನದಲ್ಲಿ ಸುಳಿಯಲೇ ಇಲ್ಲ ಬದಲಾಗಿ, ಧ್ವಜ ಹೊತ್ತುಕೊಳ್ಳುವ ಭಾರವನ್ನು ಅವರಿಂದ ಅವರ ಸುಪುತ್ರರಿಗೆ ವರ್ಗಾಯಿಸಲಾಗಿದೆ ಎಂಬ ಭಾವನೆಯಷ್ಟೇ ಅವರಲ್ಲಿತ್ತು. ಎರಡೂ ವಿಭಾಗಗಳನ್ನು ರಾಜಿಗೊಳಿಸುವ ಈ ಉಪಾಯವು ಅತ್ಯಂತ ಅಪೂರ್ವವೇ ಸರಿ.

ಯಾರನ್ನು ಎದುರು ಹಾಕಿಕೊಳ್ಳದೆ ಎಲ್ಲರನ್ನು ಜೊತೆಯಾಗಿಸಿಕೊಂಡು ಮುನ್ನಡೆಯಲು ಪ್ರಯತ್ನಿಸಿರಿ. ಪ್ರತಿಯೊಬ್ಬರ ವಿಚಾರಗಳೂ ಆಲೋಚನೆಗಳೂ ವ್ಯತಿರಿಕ್ತವಾಗಿದ್ದರೂ ಕೂಡಾ....

**ಅನೂರೂಪತೆ :**

**"ನಮ್ಮ ಪ್ರಯತ್ನ ಶರೀರಗಳನ್ನು ಬೆಸೆಯುವುದಷ್ಟೇ ಅಲ್ಲ. ಹೃದಯಗಳನ್ನು ಬೆಸೆಯುವುದು ನಮ್ಮ ಕರ್ತವ್ಯವಾಗಿದೆ".**

1. ಸುನನು ಇಬ್ನ್ ಮಾಜ 3543, ಮುಸ್ನದ್ ಅಹ್ಮದ್ 1/233
   (ಈ ಹದೀಸ್ ದುರ್ಬಲವಾಗಿದೆ)
2. ಸೀರತುನ್ನಭವಿಯ – ಇಬ್ನ್ ಹಿಷಾಮ್
3. ಸಹೀಹುಲ್ ಬುಖಾರಿ ಅಲ್ ಬಿದಾಯತು ವನ್ನಿಹಾಯ 4/294
4. ಅಲ್‌ಬಿದಾಯತು ವನ್ನಿಹಾಯ 4/290



ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

# ಮನವಿ

ಇಸ್ಲಾಮೀ ಸಹೋದರರೇ, ಅಸ್ಸಲಾಮು ಅಲೈಕುಮ್,

ನಮ್ಮೀ ಸಂಸ್ಥೆಯು ಮಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಬರುವ ಕಾಟಿಪಳ್ಳದಲ್ಲಿ ನೆಲೆ ನಿಂತಿದೆ. ಜಮೀಯತೆ ಅಹ್ಲೆ-ಹದೀಸ್ ಕರ್ನಾಟಕ ಗೋವಾ ಇದರ ಮಾರ್ಗದರ್ಶನವನ್ನು ಅನುಸರಿಸಿ ದೀನೀ ಪ್ರವರ್ತನೆಗಳಲ್ಲಿ ತೊಡಗಿಕೊಂಡಿದೆ.

- **ಅಬ್ದುಲ್ಲಾ ಇಬ್ನ್ ಮಸ್‌ಊದ್(ರ) ಕುರ್‌ಆನ್ ಹಿಫ್ಲ್ ಕಾಲೇಜು**
- **ಮರ್ಕಝು ಸ್ವಾಲಿಹಾತ್**
- **ಮದ್ರಸತು ಸ್ಸಲಫಿಯ್ಯ**
- **ಇಸ್ಲಾಮಿ ಮಾಹಿತಿ ಕೇಂದ್ರ**
- **ದಾವಾ ಪಬ್ಲಿಕೇಷನ್** ಮತ್ತು ಜಮಾಅತೆ ಅಹ್ಲೆ ಹದೀಸಿನ ಮುಖ ಪತ್ರವಾಗಿ ಪ್ರಕಟವಾಗುತ್ತಿರುವ ಏಕೈಕ ಕನ್ನಡ ಮಾಸಿಕ **'ಸಿರಾತೇ ಮುಸ್ತಖೀಮ್'** ಮುಂತಾದ ಸ್ಥಾಪನೆಗಳ ಮೂಲಕ ಅಲ್ಲಾಹನ ಹಾದಿಯಲ್ಲಿ ಕ್ರಿಯಾಶೀಲರಾಗಿದ್ದೇವೆ.

ಈ ಸ್ಥಾಪನೆಗಳ ನಿರ್ವಹಣೆಗೆ ನಿರ್ದಿಷ್ಟ ಆರ್ಥಿಕ ಮೂಲಗಳಿರುವುದಿಲ್ಲ. ಬಾಡಿಗೆ ಕಟ್ಟಡದಲ್ಲಿ ನೆಲೆ ನಿಂತಿದೆ. ಅಲ್ಲಾಹನಿಂದ ಪ್ರತಿಫಲ ಬಯಸಿ ಉದಾರ ದಾನ ನೀಡ ಬಯಸುವವರು ಆರ್ಥಿಕ ಸಹಕಾರ ನೀಡಿ ನಮ್ಮ ಚಟುವಟಿಕೆಗಳಿಗೆ ಬಲ ನೀಡಬೇಕೆಂದು ವಿನಂತಿಸಿಕೊಳ್ಳುತ್ತೇವೆ.

---

**ದಕ್ಷಿಣ ಕನ್ನಡ ಸಲಫಿ ವೆಲ್‌ಫೇರ್ ಟ್ರಸ್ಟ್ (ರಿ.)**

ಹಿರಾ ಕಾಂಪ್ಲೆಕ್ಸ್, 2ನೇ ಬ್ಲಾಕ್, ಕಾಟಿಪಳ್ಳ,

ಮಂಗಳೂರು- 575 030

خيركم من تعلم القرآن و علمه

A/c No. 0241/SB/01/012853,

IFS Code : CORP 0000 241, Corporation Bank,

Tadambail, Surathkal.

Mobile : 9986282449

E-mail : asshahadat@yahoo.co.in

"ನಿನ್ನ ಮೂಲಕ ಒಬ್ಬನು ಸತ್ಯಮಾರ್ಗವನ್ನು ಸ್ವೀಕರಿಸಿದರೆ,
ಅದು ನಿನ್ನ ಮಟ್ಟಿಗೆ ಈ ಲೋಕ ಮತ್ತು ಅದರಲ್ಲಿರುವ
ಎಲ್ಲಾ ವಸ್ತುಗಳಿಗಿಂತಲೂ ಉತ್ತಮ"

– ಪ್ರವಾದಿ ಮುಹಮ್ಮದ್(ಸ)


ಪ್ರಕಾಶಕರು

خيركم من تعلم القرآن و علمه

**ದಾವಾ ಪಬ್ಲಿಕೇಶನ್ಸ್**

(ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ–ಗೋವಾ ಇದರ ಅಧೀನ ಸಂಸ್ಥೆ)



ಹಿರಾ ಕಾಂಪ್ಲೆಕ್ಸ್, 2–184/11, 2ನೇ ಬ್ಲಾಕ್,

ಕಾಟಿಪಳ್ಳ, ಮಂಗಳೂರು – 575 030

ಮೊಬೈಲ್ : 9986282449

E-mail : asshahadat@yahoo.co.in


₹. 60/–